ಡಾ.ಜಿ.ಕೃಷ್ಣಪ್ಪ

# ತಿರು ತಿರುಗಿಯು ಹೊಸತಾಗಿರಿ

(ಬೇಂದ್ರೆಯವರ ನಾದಲೀಲೆಯ ಅಧ್ಯಯನ)



ವಂತಿ ಪಬ್ಲಿಕೇಷನ್ಸ್

# ತಿರುತಿರುಗಿಯು ಹೊಸತಾಗಿರಿ

## (ಬೇಂದ್ರೆಯವರ ನಾದಲೀಲೆಯ ಅಧ್ಯಯನ)

ಡಾ. ಜಿ. ಕೃಷ್ಣಪ್ಪ




ವಂಶಿ ಪಬ್ಲಿಕೇಷನ್ಸ್
ನಂ. ೭೨/೨, ೯ನೇ ಅಡ್ಡರಸ್ತೆ, ವಾಜರಹಳ್ಳಿ ಮುಖ್ಯರಸ್ತೆ
ಸುಭಾಷ್ ನಗರ, ಜ್ಯೋತಿನಗರದ ಹತ್ತಿರ,
ನೆಲಮಂಗಲ, ಬೆಂಗಳೂರು- ೫೬೨೧೨೩
ಮೊ : ೯೭೪೩೦೫೫೫೧೧, ೯೯೦೦೪೧೬೮೮೧

**TIRUTIRUGIYU HOSATAGIRI —**
By Dr. G. Krishnappa, # 22, Sri Gurudatta Nilaya, 1st Cross, Netaji Nagar, Mathikere, Bangaluru-560054, Mobile : 9972109209
Published by Vamshi Publications, No. 72/2, 9th Cross, Subhash Nagar, Vajarahalli Main Road, Nelamangala, Bangaluru- 562123. Mob: 9743055511, 9900416881

ಮೊದಲನೆಯ ಮುದ್ರಣ : 2015



ಬಳಸಿದ ಕಾಗದ : 70 ಜಿ.ಎಸ್.ಎಂ. ಮ್ಯಾಪ್‌ಲಿಥೊ
ಡೆಮಿ $\frac{1}{8}$, ಪುಟಗಳು : 152

ಬೆಲೆ : ರೂ. **100/-**

ವಿತರಕರು :
**ಸಾಹಿತ್ಯ ಲೋಕ ಬುಕ್ ಹೌಸ್**
ನಂ. 745, 12ನೇ ಮುಖ್ಯರಸ್ತೆ, 3ನೇ ಬ್ಲಾಕ್
ರಾಜಾಜಿನಗರ, ಬೆಂಗಳೂರು – 560 010.
ಮೊ : 9945939436

***ಟೈಪ್‌ಸೆಟ್ :***
ಸ್ನೇಹ ಗ್ರಾಫಿಕ್ಸ್
ಭುವನೇಶ್ವರಿನಗರ, ಬೆಂಗಳೂರು– 23
ದೂರವಾಣಿ : 9341158906

ಮುದ್ರಕರು :
**ಪೂರ್ಣಿಮಾ ಪ್ರಿಂಟರ್ಸ್**
**ನಂ.1/2, 7ನೇ ಕ್ರಾಸ್, ಸಮುದಾಯಭವನದ ಎದುರು,**
**ಅಜಾದ್ ನಗರ, ಚಾಮರಾಜಪೇಟೆ, ಬೆಂಗಳೂರು – 560 018**
**ದೂ : 080-32924462 ಮೊಬೈಲ್ : 9341931668**

## ಡಾ॥ ಜಿ. ಕೃಷ್ಣಪ್ಪ

ಡಾ॥ ಜಿ. ಕೃಷ್ಣಪ್ಪ (೧೯೪೮) ಬೆಂಗಳೂರಿನವರು. ಇವರು ಸಹೃದಯ ವಿಮರ್ಶಕರು. ಕವಿ ದ.ರಾ. ಬೇಂದ್ರೆಯವರ ಸಾಹಿತ್ಯವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದ್ದು ಮಾತ್ರವಲ್ಲದೆ ತಮ್ಮ ಬದುಕಿನ ಬಹುಭಾಗವನ್ನು ಬೇಂದ್ರೆ ಸಾಹಿತ್ಯ ಪ್ರಸಾರಕ್ಕಾಗಿ ಸಮರ್ಪಿಸಿಕೊಂಡಿದ್ದಾರೆ. ಬೇಂದ್ರೆ ಕಾವ್ಯದ ಓದಿಗೆ ಹೊಸ ಆಯಾಮವನ್ನು ಒದಗಿಸಿಕೊಟ್ಟಿದ್ದಾರೆ.

ಪ್ರಾದೇಶಿಕ ಸಾರಿಗೆ ಕಛೇರಿಯಲ್ಲಿ ಸೇವೆಮಾಡಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಯಾಗಿ ೨೦೦೬ರಲ್ಲಿ ನಿವೃತ್ತರಾಗಿದ್ದಾರೆ.

ಮೈಸೂರು ವಿಶ್ವವಿದ್ಯಾಲಯದಿಂದ 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ- ಒಂದು ಅಧ್ಯಯನ, ಎಂಬ ವಿಷಯದಲ್ಲಿ ಪಿಎಚ್.ಡಿ., ಪದವಿಯನ್ನು ಪಡೆದಿದ್ದಾರೆ. 'ಹಾಡು ಹಕ್ಕಿ ಅಂಬಿಕಾತನಯದತ್ತ'. 'ಡಿ.ಆರ್. ಬೇಂದ್ರೆ', 'ನಾಕುತಂತಿ-ಒಂದು ಟಿಪ್ಪಣಿ', 'ಹೂತಽದ ಹುಣಸಿ', 'ಬರೆಹದಲ್ಲಿ ಬೇಂದ್ರೆಯವರ ಬದುಕು', 'ಅಂತರಂಗದತ್ತ ನಯನ', 'ರಸ್ತೆ ನಿಯಮಗಳು' ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಇವರು ಸರಳ ಕನ್ನಡದಲ್ಲಿ ರಚಿಸಿರುವ ಮಹಾಕವಿ ಲಕ್ಷ್ಮೀಶನ 'ವಚನ ಜೈಮಿನಿ ಭಾರತ', ಹರಿಹರ ಮಹಾಕವಿಯ 'ವಚನ ಗಿರಿಜಾಕಲ್ಯಾಣ', ರಾಘವಾಂಕ ಮಹಾಕವಿಯ 'ವಚನ ಹರಿಶ್ಚಂದ್ರ ಚಾರಿತ್ರ' ಕೃತಿಗಳು ಜನಮನ್ನಣೆ ಪಡೆದಿವೆ.

೧೯೮೮ ರಿಂದ ಶಾಲಾ ಕಾಲೇಜುಗಳಲ್ಲಿ ದ.ರಾ. ಬೇಂದ್ರೆ ಕವನ ಗಾಯನ ಸ್ಪರ್ಧೆಯನ್ನು ಏರ್ಪಡಿಸಿ, ದ.ರಾ.ಬೇಂದ್ರೆ ಕೃತಿಗಳನ್ನು ಬಹುಮಾನವಾಗಿ ನೀಡುತ್ತ ಬಂದಿದ್ದಾರೆ. ಈವರೆಗೆ ೪೮೦ಕ್ಕೂ ಹೆಚ್ಚು ಬೇಂದ್ರೆ ಕೇಂದ್ರಿತ ಕಾರ್ಯಕ್ರಮಗಳನ್ನು ನಾಡಿನಾದ್ಯಂತ ನಡೆಸಿದ್ದಾರೆ. ಬೆಂಗಳೂರಿನಲ್ಲಿ ತಮ್ಮ 'ದ.ರಾ.ಬೇಂದ್ರೆ ಕಾವ್ಯ ಕೂಟ'ದ ಅಡಿಯಲ್ಲಿ ೨೦೦೭ ರಿಂದ ಪ್ರತಿವರ್ಷ ದ.ರಾ.ಬೇಂದ್ರೆ ಕಾವ್ಯ ಕುರಿತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ರಾಜ್ಯಮಟ್ಟದ ವಿಮರ್ಶಾ ಸ್ಪರ್ಧೆ ಏರ್ಪಡಿಸಿ ಸುಮಾರು ರೂ. ೧೦,೦೦೦/- ನಗದು ಬಹುಮಾನ ನೀಡುತ್ತಿದ್ದಾರೆ.

ಇವರ ವಿಶಿಷ್ಟ ಸಾಹಿತ್ಯ ಪ್ರಸರಣ ಕಾರ್ಯವನ್ನು ಗುರುತಿಸಿ ಕನ್ನಡ ಪುಸ್ತಕ ಪ್ರಾಧಿಕಾರವು ೨೦೧೧ರ ಡಾ. ಜಿ.ಪಿ. ರಾಜರತ್ನಂ ಕನ್ನಡ ಸಾಹಿತ್ಯ ಪರಿಚಾರಕ ಪ್ರಶಸ್ತಿ ನೀಡಿದೆ. ೨೦೧೪ರಲ್ಲಿ ದ.ರಾ.ಬೇಂದ್ರೆ ರಾಷ್ಟ್ರೀಯ ಟ್ರಸ್ಟ್ ಧಾರವಾಡವು ಅಂಬಿಕಾತನಯದತ್ತ ರಾಷ್ಟ್ರೀಯ ಪ್ರಶಸ್ತಿ ನೀಡಿದೆ. ಅದೇ ವರ್ಷ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ನಾಡಪ್ರಭು ಕೆಂಪೇಗೌಡ ಪ್ರಶಸ್ತಿ ಪ್ರದಾನಮಾಡಿದೆ.

# ಲೇಖಕರ ನುಡಿ

ವರಕವಿ ದ.ರಾ. ಬೇಂದ್ರೆಯವರ ಕಾವ್ಯ ಅಧ್ಯಯನ ಮಾಡುವ ಯೋಗ ದೊರಕಿದ್ದು ನನ್ನ ಜೀವನದ ಪುಣ್ಯ. ಅವರ ಪ್ರಾತಿನಿಧಿಕ ಕವನ ಸಂಕಲನ 'ನಾದಲೀಲೆ'. ಕನ್ನಡ ವಿಶ್ವವಿದ್ಯಾಲಯ ಹಂಪಿಯ ದೂರ ಶಿಕ್ಷಣ ಕೇಂದ್ರದ ಮುಖ್ಯಸ್ಥರು 'ನಾದಲೀಲೆ'ಗೆ ಮಾರ್ಗದರ್ಶಿ ಅಭ್ಯಾಸ ಪಾಠ ಬರೆದುಕೊಡಲು ಪತ್ರ ಬರೆದರು. ಈ ಕವನ ಸಂಕಲನದಲ್ಲಿ ಬೇಂದ್ರೆಯವರ ಪ್ರಾರಂಭದ ಕವನ ರಚನಾ ಪ್ರಯೋಗಗಳಿಂದ ಹಿಡಿದು ಸಿದ್ಧಿಯ ಶೃಂಗ ತಲುಪಿದ ಕವನಗಳಿವೆ. ಅವುಗಳನ್ನು ಅಧ್ಯಯನ ದೃಷ್ಟಿಯಿಂದ ಪ್ರಕೃತಿ ಗೀತೆಗಳು, ಪ್ರೇಮಗೀತೆಗಳು, ಸಾಮಾಜಿಕಪ್ರಜ್ಞೆಯ ಕವನಗಳು, ಬುದ್ಧಿಯ ಅಥವಾ ಆತ್ಮದ ಅರಿವಿನ ಗೀತಗಳು ಎಂದು ವಿಂಗಡಿಸಿದೆನು. ಪ್ರತಿ ಕವನದ ಅಂತರ್ಯವನ್ನು ತಿಳಿದು, ತಿಳಿಸುವ ಪ್ರಯತ್ನ ಮಾಡಿದೆನು. 'ನಾದಲೀಲೆ' ಕಾವ್ಯವು ಸಹೃದಯರಿಗೆ 'ತಿರುತಿರುಗಿಯು ಹೊಸತಾಗಿರಿ' ಎಂಬ ಸಂದೇಶ ನೀಡುವ ಋತುಗಾನ. ಇದು ೨೦೦೬ ಮತ್ತು ೨೦೦೭ರಲ್ಲಿ ಎಂ.ಎ. (ಮೊದಲನೆಯ ವರ್ಷ) ಗೆ ಮಾರ್ಗದರ್ಶಿ ಅಭ್ಯಾಸ ಪಾಠವಾಗಿತ್ತು. ಅನಂತರ ೨೦೧೪ರವರೆಗೆ ಎಂ.ಎ. (ಎರಡನೆಯ ವರ್ಷ) ವಿದ್ಯಾರ್ಥಿಗಳಿಗೆ ಮಾರ್ಗದರ್ಶಿ ಅಭ್ಯಾಸ ಪಾಠವಾಗಿದೆ. ಅದಕ್ಕಾಗಿ ಕನ್ನಡ ವಿ.ವಿ.ಯ ದೂರಶಿಕ್ಷಣ ಕೇಂದ್ರದ ಮುಖ್ಯಸ್ಥರಿಗೆ ನನ್ನ ವಂದನೆಗಳನ್ನು ಸಲ್ಲಿಸುವೆ.

ವಿವಿಧ ವಿಶ್ವವಿದ್ಯಾಲಯಗಳಲ್ಲಿ 'ನಾದಲೀಲೆ'ಯನ್ನು ಪಠ್ಯವಾಗಿ ಅಭ್ಯಾಸ ಮಾಡುವ ಎಂ.ಎ. ವಿದ್ಯಾರ್ಥಿಗಳಿಗೆ ಈ ಕೃತಿಯು ಹೆಚ್ಚು ಉಪಯುಕ್ತವಾಗಲಿ ಎಂದು ಆಶಿಸುವೆ.

'ನಾದಲೀಲೆ' ಅಧ್ಯಯನವು ಎಲ್ಲ ಓದುಗರಿಗೂ ತಲುಪಲಿ ಎಂದು ನಲ್ಮೆಯ ಸ್ನೇಹಿತ ಬಿ.ಎಸ್. ಜಯಪ್ರಕಾಶ ನಾರಾಯಣ ಆಶಿಸಿದರು. ಅವರ ಇಚ್ಛೆಯಂತೆ ವಂಶಿ ಪಬ್ಲಿಕೇಷನ್ಸ್ ಪ್ರಕಾಶ್ ಅವರು ಇದನ್ನು ಪ್ರಕಟಿಸಿದರು. ಅವರಿಬ್ಬರಿಗೂ ನನ್ನ ನಮನಗಳು.

ಈ ಕೃತಿಯನ್ನು ಉತ್ತಮವಾಗಿ ಡಿ.ಟಿ.ಪಿ. ಮಾಡಿದ ದೇವರಾಜು ಅವರಿಗೆ ಮತ್ತು ಅಂದವಾಗಿ ಮುದ್ರಿಸಿದ ಪೂರ್ಣಿಮಾ ಪ್ರಿಂಟರ್ಸ್‌ನ ಮಾಲೀಕರಾದ ಸೋಮೇಶ್‌ರವರಿಗೆ, ಸಿಬ್ಬಂದಿಗೆ ನನ್ನ ನಮಸ್ಕಾರಗಳು.

ನಾನು ಈ ಮೊದಲು ರಚಿಸಿರುವ ಬೇಂದ್ರೆ ಕಾವ್ಯ ವಿಮರ್ಶಾ ಕೃತಿಗಳನ್ನು ಓದಿ ಸವಿದ ಕನ್ನಡ ಕಾವ್ಯರಸಿಕರು ಮತ್ತು ವಿದ್ವನ್ಮಣಿಗಳು ಈ ಕೃತಿಯನ್ನು ಪ್ರೀತಿಯಿಂದ ಸ್ವೀಕರಿಸಿ ಆಶೀರ್ವದಿಸಬೇಕೆಂದು ಪ್ರಾರ್ಥಿಸುತ್ತೇನೆ.

ದಿನಾಂಕ : ೧೪-೪-೨೦೧೫ ಡಾ. ಜಿ. ಕೃಷ್ಣಪ್ಪ
ಬೆಂಗಳೂರು

# ಪರಿವಿಡಿ

*ಇದು ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರ ದೂರ ಶಿಕ್ಷಣ ಕೇಂದ್ರದ ಕನ್ನಡ ಎಂ.ಎ. (ಮೊದಲನೆಯ ವರ್ಷ) ವಿದ್ಯಾರ್ಥಿಗಳಿಗೆ ೨೦೦೬ ಮತ್ತು ೨೦೦೭ರಲ್ಲಿ ಮಾರ್ಗದರ್ಶಿ ಅಭ್ಯಾಸ ಪಾಠವಾಗಿತ್ತು. ಅನಂತರ ೨೦೧೪ರವರೆಗೆ ಎಂ.ಎ. (ಎರಡನೆಯ ವರ್ಷ) ವಿದ್ಯಾರ್ಥಿಗಳಿಗೆ ಮಾರ್ಗದರ್ಶಿ ಅಭ್ಯಾಸ ಪಾಠವಾಗಿದೆ.*

# ಅಧ್ಯಯನದ ಉದ್ದೇಶ

ವರಕವಿ ದ.ರಾ. ಬೇಂದ್ರೆಯವರು ಕನ್ನಡದ ನವೋದಯ ಪರಂಪರೆಯನ್ನು ರೂಪಿಸಿದವರಲ್ಲಿ ಅಗ್ರಮಾನ್ಯರು. ಕನ್ನಡದ ನವೋದಯ ಕಾವ್ಯಕ್ಕೆ ಇಂಗ್ಲಿಷ್‌ನ ರೊಮ್ಯಾಂಟಿಕ್ ಕಾವ್ಯ ಪ್ರೇರಣೆ ಎನ್ನುವ ತಿಳಿವಳಿಕೆಗೆ ಭಿನ್ನ ಮಾರ್ಗವನ್ನು ಬೇಂದ್ರೆಯವರ ಕವನಗಳು ಸೂಚಿಸಿದವು. ಇಂಗ್ಲಿಷ್ ಓದಿಕೊಂಡಿದ್ದರೂ ನಮ್ಮ ನೆಲದ ಜಾಯಮಾನ ಹಾಗೂ ಜಾನಪದದ ಸತ್ವವನ್ನು ಬಳಸಿಕೊಂಡು ಬೇಂದ್ರೆಯವರು ಕಾವ್ಯ ರಚಿಸಿದರು. ಅವರ 'ನಾದಲೀಲೆ' ಸಂಕಲನವು ಒಂದು ಲಕ್ಷಣ ಗ್ರಂಥ ಎನ್ನುವುದನ್ನು ಇಲ್ಲಿನ ಅಧ್ಯಯನದ ಮೂಲಕ ವಿವರಿಸಲು ಪ್ರಯತ್ನಿಸಲಾಗಿದೆ. ಒಟ್ಟಿನಲ್ಲಿ ಕನ್ನಡದ ನವೋದಯ ಕಾವ್ಯ ಮಾರ್ಗವನ್ನು ಈ ಸಂಕಲನದ ಮೂಲಕ ಅರಿಯುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

# ೨. ಕನ್ನಡ ನವೋದಯ ಕಾವ್ಯ

**ಪ್ರವೇಶ :**

ಇಪ್ಪತ್ತನೇಶತಮಾನ ಕನ್ನಡ ಕಾವ್ಯ ಕ್ಷೇತ್ರದ ಅತ್ಯುತ್ತಮ ಕಾಲವಾಗಿದೆ. ಆ ಕಾಲದ ಪ್ರಾರಂಭದಲ್ಲಿಯೇ ಕನ್ನಡ ಭಾಷೆಯು ತನ್ನ ಹೊಸತನವನ್ನು ಕಂಡುಕೊಂಡು ಕಾವ್ಯ ಕ್ಷೇತ್ರವೇ ಅಲ್ಲದೆ ಸಾಹಿತ್ಯದ ವಿವಿಧ ಪ್ರಕಾರಗಳಾದ ಕಥೆ, ಕಾದಂಬರಿ, ನಾಟಕ, ಪ್ರಬಂಧಗಳಲ್ಲಿ ಅದ್ವಿತೀಯ ಕವಿ ಸಾಹಿತಿಗಳನ್ನು ನೀಡಿತು. ಆಂಗ್ಲರ ಆಡಳಿತದ ಇಂಗ್ಲಿಷ್ ವಿದ್ಯಾಭ್ಯಾಸ ಹಾಗೂ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ೨೦ನೇ ಶತಮಾನದ ಪ್ರಾರಂಭದಲ್ಲಿ ಹೊಸ ಚಿಂತನೆಗಳು ಮೂಡಿದವು. ಆ ಕಾಲದ ಶಾಲಾ ಶಿಕ್ಷಕರು ಕನ್ನಡ ಪಠ್ಯಪುಸ್ತಕ ರಚನೆಗೆ ತೊಡಗಿ ಹೊಸ ಕನ್ನಡ ಕಾವ್ಯವನ್ನು ರೂಪಿಸಿದರು. ಎಸ್.ಜೆ. ನರಸಿಂಹಾಚಾರ್ಯರು ಇಂಗ್ಲಿಷ್ ಕವನಗಳ ಅನುವಾದ ಮಾಡಿದರು. ಪಂಜೆ ಮಂಗೇಶರಾಯರು ಹೊಸತನವನ್ನು ಹೀರಿಕೊಂಡು ಸ್ವೋಪಜ್ಞತೆಯಿಂದ ಹಳೆಯ ಛಂದೋರೂಪಗಳಾದ ಷಟ್ಪದಿ, ಚೌಪದಿಗಳಲ್ಲಿ ಕವನಗಳನ್ನು ರಚಿಸಿದರು. ಅವರು ರಚಿಸಿದ ಕನ್ನಡ ಮೊದಲನೆಯ ಪುಸ್ತಕ ೧೯೧೨ರಲ್ಲಿ ಪ್ರಕಟವಾಯಿತು. ಅವರ ಸಮಕಾಲೀನರಾದ ಗೋವಿಂದ ಪೈಯವರು ಹೊಸತನದ ಕವಿತಾರಚನೆಯಲ್ಲಿ ತಮ್ಮನ್ನು ಗುರ್ತಿಸಿಕೊಂಡರು. ಹಟ್ಟಿಯಂಗಡಿ ನಾರಾಯಣರಾಯರು ಇಂಗ್ಲಿಷ್ ರೋಮ್ಯಾಂಟಿಕ್ ಕವನಗಳ ಅನುವಾದಿತ ಕೃತಿ 'ಆಂಗ್ಲ ಕವಿತಾಸಾರ' ರಚಿಸಿದರು. ಅದೆಲ್ಲ ಕನ್ನಡ ಕವಿತೆ ಅಥವಾ ಭಾವಗೀತೆಗಳ ನಾಂದಿಕಾಲ.

ಆ ಪ್ರಾರಂಭದ ಉಳುಮೆಕಾಲದ ಅನಂತರ ಬಿ.ಎಂ. ಶ್ರೀಕಂಠಯ್ಯನವರು ಹೊಸಗನ್ನಡದ ಆಚಾರ್ಯ ಪುರುಷರಾಗಿ ಕನ್ನಡಕ್ಕೆ ಹೊಸಭಾಷೆ, ಹೊಸರೂಪ, ಹೊಸಛಂದಸ್ಸಿನ 'ಇಂಗ್ಲಿಷ್ ಗೀತೆಗಳು' ಎಂಬ ಅನುವಾದಿತ ಕವನ ಸಂಕಲನವನ್ನು ೧೯೨೪ರಲ್ಲಿ ನೀಡಿದರು. ಅದೇ ಸುಮಾರಿಗೆ ಉತ್ತರ ಕರ್ನಾಟಕದ ಧಾರವಾಡದಲ್ಲಿ ದ.ರಾ.ಬೇಂದ್ರೆಯವರು ಕನ್ನಡ ಕಾವ್ಯಕ್ಷೇತ್ರದಲ್ಲಿ ಹೊಸ ಪ್ರಯೋಗಗಳನ್ನು ನಡೆಸುತ್ತ 'ತುತೂರಿ' ಮತ್ತು 'ಸರಸ್ವತಿ' ಎಂಬ ಕವನಗಳನ್ನು ೧೯೧೮ರ ಪ್ರಭಾತ ಪತ್ರಿಕೆಯ ಮೊದಲ ಸಂಚಿಕೆಯಲ್ಲಿ ಪ್ರಕಟಪಡಿಸಿದ್ದರು. ಆ ಕವನಗಳು 'ಅಂಬಿಕಾತನಯದತ್ತ' ಕಾವ್ಯನಾಮದಲ್ಲಿ ಪ್ರಕಟಗೊಂಡಿದ್ದವು. ಅವರ 'ಕೃಷ್ಣಾಕುಮಾರಿ' ಎಂಬ ಕಥನಕವನ ೧೯೨೨ರಲ್ಲಿ ಪ್ರಕಟಗೊಂಡಿತ್ತು. ಅವರ ಆ ಕಾವ್ಯ ಪ್ರಯೋಗಗಳು ನವೋದಯ ಕಾವ್ಯದ ಹರಿಕಾರರೆನಿಸಿದ ಬಿ.ಎಂ.ಶ್ರೀಯವರ ಯಾವುದೇ ಪ್ರಭಾವಕ್ಕೆ ಒಳಗಾಗದೆ

ಸ್ವತಂತ್ರ ಕನ್ನಡ ಕಾವ್ಯ ಚಿಂತನೆಯಿಂದ ಮೂಡಿದ್ದಾಗಿತ್ತು. ದ.ರಾ. ಬೇಂದ್ರೆಯವರ ಕನ್ನಡ ಕಾವ್ಯರಚನಾ ಪ್ರತಿಭೆಯು ೧೯೧೬ರಲ್ಲಿಯೇ ಚಿಗುರುಗೊಂಡಿತ್ತು ಎಂಬುದನ್ನು ಅವರ ಹಿರಿಯ ಆತ್ಮೀಯರಾದ ಶಿರಹಟ್ಟಿಯ ಮಹಿಷಿ ಅಶ್ವತ್ಥರಾಯರು ಹೀಗೆ ದಾಖಲಿಸಿದ್ದಾರೆ. '೧೯೧೯ರಲ್ಲಿ ಪುಣೆಗೆ ತೆರಳಿದೆನು... ದತ್ತರಾಯರ ಪುಸ್ತಕ ಪ್ರಪಂಚವನ್ನೂ ಟಿಪ್ಪಣಿ ಬರೆದುಕೊಂಡ ಪುಸ್ತಕಗಳನ್ನು ತಿರುವಿ ಹಾಕಿದೆನು...ನಾನು ಅವುಗಳನ್ನು ಒಳ್ಳೇಕುತೂಹಲದಿಂದ ಓದತೊಡಗಿದೆನು. ಕವನಗಳಿದ್ದವು; ಗದ್ಯ ಲೇಖನಗಳಿದ್ದವು. ಕೆಲವು ಇಂಗ್ಲಿಷ್ ಕವನಗಳೂ ಇದ್ದವು. ಎಲ್ಲವನ್ನು ಎರಡು ಮೂರು ಸಲ ಓದಿದೆನು ಆನಂದಪಟ್ಟೆನು. ಅವರ ಕಾವ್ಯ ಪ್ರತಿಭೆಯನ್ನು ಕಂಡು ಮನದಲ್ಲಿಯೇ ಕೊಂಡಾಡಿದೆನು.[೧] ತೀವ್ರರಾಷ್ಟ್ರಾಭಿಮಾನಿಯಾದ ಬೇಂದ್ರೆಯವರು ಬಿ.ಎ. ಪಾಸಾದನಂತರ ಆದರ್ಶ ಜೀವನ ಮತ್ತು ಕನ್ನಡಾಭಿಮಾನದಿಂದ ಕನ್ನಡ ಮಕ್ಕಳನ್ನು ರೂಪಿಸಲು ಶಾಲಾ ಶಿಕ್ಷಕರಾದರು.

ಬೇಂದ್ರೆಯವರು ಕನ್ನಡ ನಾಡುನುಡಿಯ ಚಿಂತನೆಯಿಂದ ೧೯೨೩ರಲ್ಲಿ 'ಗೆಳೆಯರ ಗುಂಪು' ಎಂಬ ಸಂಘಟನೆಯನ್ನು ಸ್ಥಾಪಿಸಿದರು. ಅದು ಉತ್ತರ ಕರ್ನಾಟಕದಲ್ಲಿ ನವೋದಯಕಾವ್ಯದ ಪ್ರಯೋಗ ಶಾಲೆಯಾಗಿತ್ತು. ಅದು ಮಧುರಚೆನ್ನ, ಶಂ.ಬಾ.ಜೋಶಿ, ಶ್ರೀಧರ ಖಾನೋಳಕರ, ಆನಂದಕಂದ, ವಿನೀತ ರಾಮಚಂದ್ರರಾಯ, ರಂ.ಶ್ರೀ.ಮುಗಳಿ, ವಿ.ಕೃ.ಗೋಕಾಕ್, ಸಿಂಪಿಲಿಂಗಣ್ಣ, ನಾರಾಯಣಸಂಗಮರಂತವರ ವಿಶಿಷ್ಟ ಸಂಘಟನೆಯಾಗಿತ್ತು. ಬೇಂದ್ರೆಯವರು ಕನ್ನಡ ಚಿಂತನೆಯ 'ಕನಸಿನೊಳಗೊಂದು ಕನಸು' (೧೯೨೩ ಜಯಕರ್ನಾಟಕ ಪತ್ರಿಕೆ) ಕವನವನ್ನು; ನವೋದಯ ಕಾವ್ಯದ ಶ್ರೇಷ್ಠ ಕವನ 'ಬೆಳಗು' (೧೯೧೯ ಸ್ವಧರ್ಮ ಪತ್ರಿಕೆ)ವನ್ನು ರಚಿಸಿ ಕನ್ನಡ ನವೋದಯ ಕಾವ್ಯದ ಕವಿಗಳಾಗಿ ಬೆಳಗಿದರು. ಕನ್ನಡ ನವೋದಯ ಸಾಹಿತ್ಯ ಕರ್ನಾಟಕದಾದ್ಯಂತ ಹೊಸ ಅಲೆಯಾಗಿ ಹೊಮ್ಮಿದ್ದು ಡಿ.ವಿ.ಜಿ. ಮಾಸ್ತಿ, ಕುವೆಂಪು, ತೀನಂಶ್ರೀ, ಶಿವರಾಮ ಕಾರಂತ, ಪುತಿನ, ಕೆ.ಎಸ್. ನರಸಿಂಹಸ್ವಾಮಿ, ವಿ. ಸೀತಾರಾಮಯ್ಯ ಮುಂತಾದವರ ಹಲವು ಸಾಹಿತ್ಯ ಪ್ರಕಾರಗಳಿಂದ ಮಹಾನದಿಯಾಗಿ ಹರಿಯಿತು.

---

೧. ಮಹಿಷಿ ಅಶ್ವತ್ಥರಾಯರು ಶಿರಹಟ್ಟಿ, ಬೇಂದ್ರೆಯವರ ಮನೆತನ, ಚುಳಕಿ ಗೋವಿಂದರಾಯರು (ಸಂ), ಕವಿವರ ಬೇಂದ್ರೆ, ಲಲಿತಸಾಹಿತ್ಯ ಮಾಲೆ, ಧಾರವಾಡ, ೧೯೪೬, ಪು.೭

## ೩. ಅಂಬಿಕಾತನಯದತ್ತರ 'ನಾದಲೀಲೆ'

'ನಾದಲೀಲೆ' 'ಅಂಬಿಕಾತನಯದತ್ತ' ರೆನಿಸಿದ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರ ಐದನೇ ಕವನ ಸಂಕಲನವಾಗಿ ೧೯೩೮ರಲ್ಲಿ ಪ್ರಕಟಗೊಂಡಿತು. ಅದು ಅವರ ನಲವತ್ತೆರಡನೆಯ ವಯಸ್ಸಿನ ತುಂಬುಮನಸ್ಸಿನ ಕಾಲ. ಜೀವನದ ಕಷ್ಟಸುಖ, ಸಾವು ನೋವು, ಕಾಮ ಪ್ರೇಮ, ವ್ಯಕ್ತಿ ಸಮಾಜ, ಉದ್ಯೋಗ ನಿರುದ್ಯೋಗ, ಕತ್ತಲೆ ಬೆಳಕಿನ ದ್ವಂದ್ವ ಸಂಘರ್ಷಕ್ಕೆ ಒಳಗಾಗಿ ಚಿಂತನಶೀಲವಾದ ಕಾಲ. ಈ ಕವನ ಸಂಕಲನದಲ್ಲಿರುವ ೫೧ ಕವನಗಳಲ್ಲಿ ವಾಸ್ತವವಾದ ವಸ್ತು ಜಗತ್ತನ್ನು ಪರಿಶೀಲಿಸುತ್ತ ಲೋಕದ ನಿತ್ಯಸತ್ಯವನ್ನು ಧ್ಯಾನಿಸಿ ಬುದ್ಧಿ ಮತ್ತು ಆತ್ಮದ ಅರಿವಿನ ಶೋಧಕ್ಕೆ ತೊಡಗಿದ ಚಿಂತನೆಗಳಿವೆ. ಸಂಸಾರದಲ್ಲಿಯ ಸಂಯೋಗ ಮತ್ತು ವಿಪ್ರಲಂಭ ಶೃಂಗಾರಗಳ ಚಿತ್ತಶೋಧದಲ್ಲಿ ಪ್ರೇಮದ ಹುಡುಕಾಟ; ಆ ಪ್ರೇಮ ಫಲಗಳಾದ ಮಕ್ಕಳ ಒಡನಾಟದ ಆನಂದವಿದೆ. ಸಮಾಜ ಮತ್ತು ವ್ಯಕ್ತಿಯ ಸಂಘರ್ಷದಲ್ಲಿ ತೀವ್ರಗೊಂಡ ಸಾಮಾಜಿಕ ಪ್ರಜ್ಞೆ, 'ಅಂಬಿಕಾತನಯ' ನ ಮಾತೃತತ್ವ, ಸ್ನೇಹಗೀತೆ, ಪ್ರಕೃತಿಗೀತೆ, ವಿಡಂಬನ ಲಹರಿಗಳಿವೆ. ಹೀಗಾಗಿ ಇದು ಅವರ ಪ್ರಾತಿನಿಧಿಕ ಕವನ ಸಂಕಲನವಾಗಿದೆ.

ಈ ಕವನ ಸಂಕಲನದ ಒಡಲಿನಲ್ಲಿ ಅವರ ಪ್ರಾರಂಭದ ಕವನ ರಚನಾ ಪ್ರಯೋಗಗಳಿಂದ ಹಿಡಿದು ಸಿದ್ಧಿಯ ಶೃಂಗ ತಲುಪಿದ ಕವನಗಳಿವೆ. ೧೯೧೮ 'ಗೆ, ೧೯೧೯ 'ಕನ್ನಡದ ಕಂದವ್ವನಲಾಲಿ', ೧೯೨೨ 'ನಾಲಗೆ', ೧೯೨೪ 'ನೀ ಹಿಂಗ ನೋಡಬ್ಯಾಡ ನನ್ನ', ೧೯೨೬ 'ನಾಯಕ', 'ನಿಗಿನಿಗಿ ಮುಗಿಲು', ೧೯೨೭ 'ಯಾರಿಗೂ ಹೇಳೋಣುಬ್ಯಾಡ', ೧೯೨೯ 'ಭೂಮಿ ತಾಯಿಯ ಚೊಚ್ಚಿಲಮಗ' ೧೯೩೦ ಶ್ರಾವಣ, 'ಚಿಗುರೆ', 'ಶುಭನುಡಿಯೆ ಶಕುನದ ಹಕ್ಕಿ' ೧೯೩೨ ಕುರುಡು ಕಾಂಚಾಣ; ಹಿಂಡಲಗಿ ಜೇಲಿನಲ್ಲಿ ಬರೆದದ್ದು: 'ಇದೊಪಂಜರ', 'ನಿದ್ದೆ' 'ಅದುವರೆಗೂ'; ನಜರ್ ಬಂಧಿ ಶಿಕ್ಷೆಯಿಂದ ಮುಗದ ಗ್ರಾಮದಲ್ಲಿದ್ದಾಗ ಬರೆದದ್ದು : 'ನಾದಲೀಲೆ', 'ಮಲ್ಲಾಡದ ಗಿಣಿಯೆ', 'ಮನುವಿನ ಮಕ್ಕಳು', 'ಯಜ್ಞ', 'ಸಚ್ಚಿದಾನಂದ', 'ಹೆಣದಹಿಂದೆ', 'ಭಾವಗೀತೆ'; ೧೯೩೩-೩೫ ಪುಣೆ : 'ಏಳುಕನ್ನಿಕೆಯರು', 'ಎದೆಯ ಒಕ್ಕಲಿಗ', 'ನಿರ್ಭಯಾ', 'ಬನ್ನಿ ಬನ್ನಿ ಕನಸುಗಳೇ', 'ತಾಯಿ-ಕೂಸು', 'ಅನಂತ ಪ್ರಣಯ', 'ಮರೆಯುವಿಯೋ, ಅರಿಯುವಿಯೋ', 'ಎಲ್ಲಿರುವೆ ರಾಜಗಂಭೀರಾ','ಅವರ್ಣನೀಯ ಅರ್ವಾಚೀನ ಸೌಂದರ್ಯ' 'ನಾನು ಬಡವಿ', 'ಅಷ್ಟುಪ್ರೀತಿ ಇಷ್ಟುಪ್ರೀತಿ', 'ದೀಪ', 'ಬೆಳುದಿಂಗಳನೋಡ'

ಬೇಂದ್ರೆಯವರ ಕಾವ್ಯವು ವೈಯಕ್ತಿಕವಾದ ವ್ಯಷ್ಟಿಯ ನೆಲೆಯಿಂದ ರೂಪುಗೊಂಡಿದ್ದರೂ ತನ್ನದೇ ಆದ ವಿಲಕ್ಷಣ ಗುಣದಿಂದ ಸಾಧಾರಣೀಕರಣಗೊಂಡು ಸಮಷ್ಟಿಯ ಕಾವ್ಯವಾಗಿದೆ. ಅವರ ದಾಂಪತ್ಯ ಗೀತವಾದ 'ಸಖೀಗೀತ', 'ಮನದನ್ನೆ' ಮೊದಲಾದವುಗಳು ಏಕಾಂತದ ಅಭಿವ್ಯಕ್ತಿಯಾಗಿದ್ದರೂ ಲೋಕಾಂತದ ಹಾಡುಗಳಾಗಿವೆ. ಅವರ ಕಾವ್ಯ ಸಹೃದಯರ ಗೀತವಾಗಿ ಆಹ್ಲಾದವನ್ನೀಯಲು ಅವುಗಳಲ್ಲಿಯ ನಾದ, ಲಯ, ಜೀವನೋಲ್ಲಾಸ, ಮಾಧುರ್ಯದ ಕಂಪು ಹಾಗೂ ರಸಾರ್ದ್ರ ಗುಣವೇ ಕಾರಣವಾಗಿವೆ. ಅವರ ಕಾವ್ಯ ಅವರ ಜೀವನಾನುಭವ ಪ್ರಕಟಗೊಂಡ ಶ್ರೇಷ್ಠ ಕಲೆಯಾಗಿದೆ. ಹೀಗಾಗಿ ಅವರ ಕಾವ್ಯವನ್ನು ಅರ್ಥ ಮಾಡಿಕೊಳ್ಳಲು ಅವರ ಜೀವನ ಮತ್ತು ಕಾವ್ಯರಚನಾ ಸಂದರ್ಭ ತಿಳಿಯುವುದು ಅವಶ್ಯಕವಾಗಿದೆ. ಕಾವ್ಯದ ಒಡಲಿನಿಂದಲೇ ಕಾವ್ಯವನ್ನು ವಿಶ್ಲೇಷಿಸಿ ಅದರ ಬೆಲೆಕಟ್ಟುವ ಚಿಂತನಾಸರಣಿಯೊಂದಿದೆ. ಅದನ್ನು ಗೌರವಿಸುತ್ತಲೇ ಕವಿಯ ಆಲೋಚನೆಗೆ ಕಾರಣವಾದ ವೈಯಕ್ತಿಕ, ಸಾಮಾಜಿಕ ಸಾಂಸ್ಕೃತಿಕ ಸಂದರ್ಭಗಳ ವಿಶ್ಲೇಷಣೆ ಆ ಕಾವ್ಯದ ತಿಳಿವನ್ನು ಹೆಚ್ಚು ಆಳಕ್ಕೆ ಕೊಂಡೊಯ್ಯುತ್ತದೆ ಎಂದು ಹೇಳಬಹುದು.

## ೪. ಬೇಂದ್ರೆಯವರ ಜೀವನ ಮತ್ತು ಕಾವ್ಯ

ದ.ರಾ. ಬೇಂದ್ರೆಯವರು ೩೧-೧-೧೮೯೬ರಲ್ಲಿ ಧಾರವಾಡದಲ್ಲಿ ಹುಟ್ಟಿದರು. ಅವರ ತಂದೆ ರಾಮಚಂದ್ರ ಬೇಂದ್ರೆ, ತಾಯಿ ಅಂಬವ್ವ (ಅಂಬಿಕೆ). ಅವರು ವೇದಪಾರಂಗತ ಚಿತ್ಪಾವನ ಬ್ರಾಹ್ಮಣರು. ಅವರ ಮೂಲ ರತ್ನಗಿರಿ ಜಿಲ್ಲೆಯಲ್ಲಿ ಕೇಳಸಿ ಎಂಬ ಗ್ರಾಮ. ಅವರ ಮಾತೃಭಾಷೆ ಮರಾಠಿ. ಬೇಂದ್ರೆಯವರ ಮುತ್ತಜ್ಜ ರಾಮಭಟ್ಟ ಬೇಂದ್ರೆ ಎಂಬುವರು ಲಾಗೂ ಮನೆತನದ ಪುರೋಹಿತರಾಗಿ ಶಿರಹಟ್ಟಿಗೆ ಬಂದರು. ರಾಮಭಟ್ಟರು ದಶಗ್ರಂಥಿಗಳು, ವೇದಪಾರಂಗತರು, ದೈವ ಉಪಾಸಕರೂ ಆಗಿದ್ದರು. ಅವರ ಮಗ ಅಪ್ಪಾಭಟ್ಟರು ಸಂಸ್ಕೃತದಲ್ಲಿ ಅಗಾಧ ಪಂಡಿತರಾಗಿದ್ದು 'ಪಾರ್ವತಿ ಪರಿಣಯ', 'ಛಂದೋದಾಹರಣ' ಎಂಬ ಕೃತಿಗಳನ್ನು ರಚಿಸಿದ್ದರು. ಅಪ್ಪಾಭಟ್ಟರಿಗೆ ರಾಮಚಂದ್ರಪಂತ ಬೇಂದ್ರೆ ಮತ್ತು ಬಂಡೋಪಂತ ಬೇಂದ್ರೆ ಎಂಬ ಇಬ್ಬರು ಮಕ್ಕಳು. ರಾಮಚಂದ್ರ ಬೇಂದ್ರೆಯವರು ವೇದಾಧ್ಯಯನ ಮಾಡುತ್ತ ವೈದಿಕ ವೃತ್ತಿ ನಡೆಸುತ್ತಿದ್ದರು. ತಮ್ಮ ಬಂಡೋಪಂತ ಬೇಂದ್ರೆ ಮ್ಯಾಟ್ರಿಕ್ ಪಾಸಾಗಿ ನೌಕರಿಹಿಡಿದು ಪುಣೆಯಲ್ಲಿ ವಾಸವಾದರು. ರಾಮಚಂದ್ರ ಬೇಂದ್ರೆಯವರ ಹಿರಿಯ ಮಗ ನಮ್ಮ ವರಕವಿ ದತ್ತಾತ್ರೇಯ ಬೇಂದ್ರೆ. ಬೇಂದ್ರೆಯವರು ತಮ್ಮ 'ಬೇಂದ್ರೆ' ಎಂಬ ಹೆಸರಿನ ಮೂಲದ ಬಗ್ಗೆ " 'ಬೇಂದ್ರೆ' ಅಂದರೆ ನಾವು ಕೊಂಕಣದಿಂದ ಬಂದಿದ್ದೇವೆ. ವೇದ ಹೇಳುವವರು 'ವೇದ್ರೆ' ಆದರು. ಬರುಬರುತ್ತ ವೇದ್ರೆ, ವೇಂದ್ರೆ ಅಂದರು. ಆ ಮೇಲೆ ವೇಂದ್ರೆ ಬೇಂದ್ರೆ ಆದರು" ಎಂದು ಹೇಳಿಕೊಂಡಿದ್ದಾರೆ.[೨]

ಬಡತನದ ಬಾಳು ಸಾಗಿಸಲು ಖಾನಾವಳಿ ನಡೆಸುತ್ತಿದ್ದ ಗಟ್ಟಿಜೀವ ಅಜ್ಜಿಯ ಮಮತೆಯಲ್ಲಿಯೇ ಅವರು ಬೆಳೆದರು. ಅವರ ಕುಟುಂಬವೆಂದರೆ ಅವರೇ ಹೇಳಿರುವಂತೆ "ನಮ್ಮ ತಾಯಿಗೆ ಅಜ್ಜಿ, ನಮ್ಮ ಅಜ್ಜಿಗೆ ನಮ್ಮ ತಾಯಿ-ಎರಡು ಹೆಣ್ಣು ಜೀವ ಒಂದನ್ನೊಂದು ಅಂಟಿಕೊಂಡುನಿಂತ"[೩] ಪುಟ್ಟ ಕುಟುಂಬ. ಅವರ ೧೧ನೇ

---

೨. ಶಕುಂತಲಾ ನಾಯಕ, ಬೇಂದ್ರೆ ಅಣ್ಣಾ, 'ಬೇಂದ್ರೆ ಸ್ಮೃತಿ'(ಸಂ), ಬೆಂಗಳೂರು, ೧೯೮೨, ಪು.೩೧

೩. ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ. ೧೯೭೪, ಪು-೪೨

ವಯಸ್ಸಿನಲ್ಲಿ ಅವರ ತಂದೆ ಗಂಡಮಾಲೆರೋಗದಿಂದ ತೀರಿಹೋದರು. ಬೇಂದ್ರೆಯವರು ಜನಿಸಿದ್ದು ಅವರ ತಾಯಿಯ ತಾಯಿ ಗೋದೂಬಾಯಿಯ ಒಲವಿನ ಮನೆಯಲ್ಲಿ. ಅವರ ಬಾಲ್ಯ ಸ್ತ್ರೀ ಪೋಷಿತವಾದುದಾಗಿತ್ತು. ಸ್ತ್ರಿ ಶೋಷಿತರಲ್ಲಿ ಶೋಷಿತಳು. ಅವರ ಬವಣೆಯು ಕವಿಯ ಮಾರ್ದವತೆಗೆ ಪ್ರತೀಕವಾಯಿತು. ಅವರಿಗೆ ತಾಯಿ ಪ್ರತ್ಯಕ್ಷ ದೇವತಾ ಸ್ವರೂಪವಾಗಿದ್ದು, ಸೃಜನಶೀಲ ವ್ಯಕ್ತಿತ್ವವೆಂಬುದೇ ತಾಯಿತತ್ತ್ವ ಎಂದು ತಿಳಿದರು.

'ಆ ತಾಯಿ ಮಾತಾಯಿ ಈ ಬಾಯಿತುತ್ತಲ್ಲ
ಅವಳನ್ನು ಸುತ್ತಿಸಲು ಎದೆಸಾಲದು.' [೪]

ಎಂಬ ಎರಡುಸಾಲುಗಳಲ್ಲಿ ತಾಯಿಯ ದಿವ್ಯತೆಯನ್ನು ವರ್ಣಿಸಿದ್ದಾರೆ.

## (ಅ) ಧಾರವಾಡದ ಜಾನಪದ ಪರಿಸರ

ದ.ರಾ. ಬೇಂದ್ರೆಯವರು ಧಾರವಾಡದ ಜಾನಪದ ಪರಿಸರದಲ್ಲಿ ಹುಟ್ಟಿ ಬೆಳೆದು, ಅದರ ದನಿಗೆ ಮೈಮನಕೊಟ್ಟು, ಅದರ ಸಹಜನಾದದಲ್ಲಿ ಉಲ್ಲಾಸಗೊಂಡು, ಅದರ ಸೊಗಡನ್ನು ಶಿಷ್ಟಕಾವ್ಯದಲ್ಲಿ ತಂದ ಜಾನಪದಗಾರುಡಿಗರು. ಆ ಜಾನಪದ ಧಾಟಿ ಅವರ ನುಡಿಯ ಭಾವವಾದುದರ ಬಗ್ಗೆ ಅವರು: 'ಕನ್ನಡ ಜಾನಪದದ ಪ್ರವೇಶವೂ ಆವೇಶವೂ ಎಂದು ನನ್ನಲ್ಲಿ ಗೂಡು ಮಾಡಿಕೊಂಡಿತೊ ನಾನು ಹೇಳಲಾರೆ. ತಾಯಿ ಅಜ್ಜಿ ಬೀಸುವಾಗ ಹೇಳುವ ಪದಗಳಿಂದ, ಬೆಳಗುಜಾವದಲ್ಲಿ ನನಗೆ ಎಚ್ಚರಿಕೆಗಿಂತ ನಿದ್ದೆ ಹೆಚ್ಚು. ಏನು ಆ ಅವಸ್ಥೆಯಲ್ಲಿಯೇ ಪರಿಣಾಮ ಹೆಚ್ಚೋ? ದಾಸರ ಗೋವಿಂದಪ್ಪ ಮೃದುತಾಳ ಭಜನೆಯೊಡನೆ 'ಗರುಡಾsssನೇರಿ ಬರುವಾsss । ಇವನ್ಯಾರಮ್ಮಯ್ಯಾ ॥ ಎಂದೊ, 'ಜಯಪಾಂಡುರಂಗss । ಏನು ಮಾಡಿದೀ ಮಾನಭಂಗ॥' ಎಂದೊ ರಾಗ ಎಳೆದಾಗ ನನಗೆ ಚುಕ್ಕು ಬಡೆದು ಮಲಗಿಸಿದಂತಾಗುತ್ತಿತ್ತು. 'ನಿಂಬಿಯಮರ ಹುಟ್ಟಿ ನಿಂಗಕ್ಕೆ ನೆರಳಾಗಿ ಬಂದ ಜಂಗಮಕ್ಕ ಬಸವಯ್ಯಾ ಸೂವಿ॥' ಎಂದು ಬಾಲಬಸವರ ಹಾಡು ಕಿವಿಗೆ ಬೀಳುತ್ತಲೇ ನಮ್ಮ ಕಾಲು ಕೇಳದೆಕಿತ್ತಿ ಅವರಿದ್ದಲ್ಲಿಗೆ ಹೋಗಿ ಅವರ ಸಾಕ್ಷಾತ್ಕಾರವಾದಾಗ ಈ ಕಣ್ಣಿಗೆ ತೃಪ್ತಿ. ಗೊಲ್ಲರು, ಕವಲೆತ್ತಿನವರು, ದುರ್ಗಮುರ್ಗಿಗಳು– ಎಂಥ 'ತಾನಾತಂದಾನಾ' ಇದ್ದರೂ ಕಿವಿಗೆ ಔತಣವೆನಿಸುತ್ತಿತ್ತು"[೫] ಎಂದು ಹೇಳಿದ್ದಾರೆ. ಹೀಗೆ ಬಾಲ್ಯದಲ್ಲಿ ಬೇಂದ್ರೆಯವರ ಕಿವಿಯ ಮೇಲೆ ಬಿದ್ದದ್ದು ಜನಪದ ಹಾಡುಗಳು, ಮಂತ್ರಗಳಲ್ಲ. ಅವು ತಾಯಿಯ ಮೊಲೆಹಾಲಿನಂತೆ ರುಚಿ ರಸವಾಗಿ, ನಾದಲಯವನ್ನು ರೂಪಿಸಿ ಅವರ ಜೀವಸತ್ವವಾದವು.

---

೪. ದ.ರಾ.ಬೇಂದ್ರೆ, ಮತ್ತೆ ಶ್ರಾವಣಾಬಂತು, ಸಮಾಜಪುಸ್ತಕಾಲಯ, ಧಾರವಾಡ, ೧೯೭೩, ಪುಟ.೪

೫. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. ೫೨

ಬೇಂದ್ರೆಯವರು ಧಾರವಾಡದ ಒಬ್ಬ ಸಾಧಾರಣ ಬಡ ಬಾಲಕನಾಗಿ ಕುತೂಹಲದ ಕಣ್ಣಿಂದ ಎಲ್ಲವನ್ನೂ ನೋಡುತ್ತ, ತನ್ನ ಓರಗೆಯ ಹುಡುಗರೊಡನೆ ಮುಕ್ತವಾಗಿ ಆಡುತ್ತ ಬೆಳೆದವರು.

ಅವರು ಸುತ್ತ ಮುತ್ತಲ ಜನಜೀವನವನ್ನು ಗಮನಿಸುತ್ತ, ಅದರ ಎಲ್ಲ ಒಳಹೊರ ಭಾವದ ಬದುಕನ್ನು ತನ್ನದಾಗಿಸಿಕೊಳ್ಳುತ್ತ ಬೆಳೆದವರು. ಅವರ ಬಾಲ್ಯದ ಆಸಕ್ತಿ ಕುರಿತು ವಾಮನ ಬೇಂದ್ರೆಯವರು "ಶಾಲೆಗೆ ಒಯ್ಯುವ ಪಾಟೀಗಂಟಿನಲ್ಲಿ ಪುಸ್ತಕದ ಜೊತೆಗೆ ಚಾವಂಗ, ಕುಂಟ್ಬಲಪಿ, ಬುದ್ಧಿಬಳ, ಗಂಜೀಪು, ಹುಲಿಹಳ್ಳು ಮೊದಲಾದ ಆಟದ ಸಾಮಾನು ಹೆಚ್ಚಾಗಿರಬೇಕು. ಶಾಲೆಗೆ ಹೋಗುವ ಹಾದಿಯಲ್ಲಿ ಮಂಗಾಟ, ಕರಡಿಕುಣಿತ, ಕೌಲೆತ್ತು, ಕಸರತ್ತು ನಡೆದಿದ್ದರೆ ಅದನ್ನು ನೋಡುವುದರಲ್ಲಿ ಬೇಂದ್ರೆಯವರ ಸವಾರಿ ಹೊರಟಿದ್ದನ್ನು ಅವರ ಬಾಲ್ಯ ಸ್ನೇಹಿತರು ಚೇಷ್ಟೆ ಮಾಡುತ್ತಿದ್ದರು. ಶಾಲೆ ಓದಿಗಿಂತ ತನ್ನ ಸುತ್ತ ಮುತ್ತಲಿನ ಜೀವನ–ನಿರೀಕ್ಷೆಯಲ್ಲಿ ಬೇಂದ್ರೆಯವರ ಮನಸ್ಸು ತೊಡಗಿರುತ್ತಿತ್ತಂತೆ"[೬] ಎಂದು ವರ್ಣಿಸಿದ್ದಾರೆ.

ಬೇಂದ್ರೆಯವರ ಅಜ್ಜಿ ಮತ್ತು ತಾಯಿಯವರು ದೈವಭಕ್ತರಾಗಿದ್ದರು. ಅವರು ಮನೆಯಲ್ಲಿ ಮಾಡುತ್ತಿದ್ದ ಚಿದಂಬರ ಭಜನೆ ಮತ್ತು ರಾಮಭಜನೆಗಳು ಬೇಂದ್ರೆಯವರನ್ನು ಭಕ್ತಿಪಥದತ್ತ ಕೊಂಡೊಯ್ಯುವ ದೀವಿಗೆಗಳಾದವು. ಬೇಂದ್ರೆಯವರು ತಾಯಿ ಮತ್ತು ಅಜ್ಜಿಯವರಿಗೆ ಬ್ರಹ್ಮಚೈತನ್ಯ, ಅಕ್ಕಲಕೋಟೆ ಮಹಾರಾಜರ ಚರಿತ್ರೆ, ಶಿವ ಲೀಲಾಮೃತ, ಜ್ಞಾನಸಿಂಧು, ಹರಿವಿಜಯ, ಪಾಂಡವ ಪ್ರತಾಪ ಮುಂತಾದ ಮರಾಠಿಗ್ರಂಥಗಳನ್ನು ಓದಿ ಹೇಳುತ್ತಿದ್ದರು. ಆ ಓದಿನ ಪ್ರಭಾವ ಅವರನ್ನು ಮಾತೃ ಆರಾಧಕರನ್ನಾಗಿ ಮಾಡಿತು. ಧಾರವಾಡ ಜಾನಪದ ಹಾಗೂ ಭಕ್ತ ಪರಂಪರೆಯಲ್ಲಿ ಒಂದಾಗಿ ಬೆಳೆದ ಬೇಂದ್ರೆಯವರು ಜಾನಪದವನ್ನು, ಭಕ್ತಿಯನ್ನು ತಮ್ಮ ಕಾವ್ಯದ ಒಂದು ಸಹಜ ಭಾವವಾಗಿಸಿಕೊಂಡರು. ಅವರಿಗೆ ಜನಪದ ಬದುಕು ಮತ್ತು ಭಾಷೆ ಒಂದು ಬುದ್ಧಿಪೂರ್ವಕ ಕಾವ್ಯ ಪ್ರಯೋಗವಾಗಿರಲಿಲ್ಲ. ಅದು ಸಹಜ ಸ್ಫೂರ್ತಿಯ ಜೀವ ಲಹರಿಯಾಗಿತ್ತು. ಬೇಂದ್ರೆಯವರ ಧಾರವಾಡವನ್ನು ಕುರಿತು ಕೀರ್ತಿನಾಥ ಕುರ್ತಕೋಟಿಯವರು– "ಧಾರವಾಡದ ನೆಲದ ಒಂದೊಂದು ಚೂರು ಬೇಂದ್ರೆಯವರಿಗೆ ತಮ್ಮ ಇತಿಹಾಸವನ್ನು ಹೇಳಿವೆ. ಅಭಿಜಾತತೆಯೇ ಆಗಲಿ, ಆಧುನಿಕತೆಯೇ ಆಗಲಿ ಅವರಿಗೆ ಧಾರವಾಡ ನೆಲದಲ್ಲಿಯೇ ಪ್ರತ್ಯಕ್ಷವಾಗಬೇಕು. ಧಾರವಾಡದ ಮಣ್ಣು ನೀರುಗಳು, ಅಲ್ಲಿಯ ಜನತೆಯ ಜೀವನ ಪ್ರಕೃತಿಯಂತೆ ಚೇತನದ ಸ್ಪರ್ಶಕ್ಕಾಗಿ ಕಾಯುವಂಥವು, ಬೇಂದ್ರೆಯವರ ಸೃಜನಶಕ್ತಿಯರಹಸ್ಯ ಇಲ್ಲಿದೆ"[೭] ಎಂದು ಹೇಳಿದ್ದಾರೆ.

---

೬. ವಾಮನ ಬೇಂದ್ರೆ, 'ಬೇಂದ್ರೆ ಜೀವನ ಪರಿಚಯ' ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೯೦, ಪು. ೧೪, ೧೫

೭. ಕೀರ್ತಿನಾಥ ಕುರ್ತುಕೋಟಿ, 'ಬಾರೋಸಾಧನಕೇರಿಗೆ' ಮನೋಹರ ಗ್ರಂಥಮಾಲಾ, ಧಾರವಾಡ, ೧೯೯೩, ಪು. ೨೩.

ಬೇಂದ್ರೆಯವರು ವಾಸಿಸುತ್ತಿದ್ದ ಕಾಮನಕಟ್ಟಿಯಲ್ಲಿ ಸಾಹಿತ್ಯಿಕ, ರಾಷ್ಟ್ರೀಯ ಮತ್ತು ಸಾಂಸ್ಕೃತಿಕ ಚಿಂತನೆಯನ್ನು ಹೊತ್ತ ಶಾಂತಕವಿ, ಕಾವ್ಯಾನಂದ (ನರಸಿಂಹಾಚಾರ್ಯ) ಪುಣೇಕರ, ವೆಂಕಟ ರಂಗೋಕಟ್ಟಿ, ಗರಗ ಸಿದ್ಧಗಂಗಪ್ಪ, ಸೋಂಡಿಲಕ್ಷಾಧೀಶ. ರಾವಸಾಹೇಬ ಮಾಳಾಪುರ, ನಾ.ಶ್ರೀ.ರಾಜಪುರೋಹಿತ, ಕಡಪಾ ರಾಘವೇಂದ್ರರಾವ್. ನರಗುಂದಕರವಕೀಲ, ಮಧ್ವಾಚಾರ್ಯಕಟ್ಟಿ ಮಾಸ್ತರ ಅವರು ವಾಸಿಸುತ್ತಿದ್ದರು. ಅಲ್ಲಿಯೇ ವಿಕ್ಟೋರಿಯಾ ಹೈಸ್ಕೂಲು, ನೇಟಿವ್ ಜನರಲ್ ಲೈಬ್ರರಿ, ವಿದ್ಯಾವರ್ಧಕಸಂಘ, ಎರಡು ಥೇಟರುಗಳು, ಛಾಪಾಖಾನೆಗಳು ಇದ್ದು ಅದು ಆಲೂರು ವೆಂಕಟರಾಯರ ರಾಷ್ಟ್ರೀಯ ಚಳವಳಿಯ ಕೇಂದ್ರವಾಗಿತ್ತು. ಅದನ್ನು ಬೇಂದ್ರೆಯವರ ಶಿಕ್ಷಕರಾದ ನಾ. ಶ್ರೀ ರಾಜಪುರೋಹಿತರು ಹೀಗೆ ಹೇಳಿದ್ದಾರೆ: "ವಂಗ ಭಂಗ ಚಳವಳಿಯಲ್ಲಿ ಶ್ರೀ ಆಲೂರು ವೆಂಕಟರಾಯರು ಮತ್ತು ನಾನು ಸೇರಿ 'ಕರ್ನಾಟಕನೂತನ ವಿದ್ಯಾಲಯ' ಎಂಬುದೊಂದು ರಾಷ್ಟ್ರೀಯ ಶಾಲೆಯನ್ನು ಸ್ಥಾಪಿಸಿ, ರಾಷ್ಟ್ರೀಯ ಶಿಕ್ಷಣದ ಕಾರ್ಯವನ್ನು ಕೈಗೊಂಡಿದ್ದೆವು. ಈ ರಾಷ್ಟ್ರೀಯ ವಿದ್ಯಾಲಯವು ಶ್ರೀ ಬೇಂದ್ರೆ ಇವರ ಮನೆಯ ಎದುರಿನಲ್ಲಿಯೇ ಇದ್ದಿತು. ಈ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗೆ ಅತಿರಥಿ ಮಹಾರಥಿಗಳಾದ ರಾಷ್ಟ್ರೀಯ ಮುಖಂಡರು ಮೇಲಿಂದ ಮೇಲೆ ಭೇಟಿ ಕೊಡುತ್ತಿದ್ದರು. ಈ ಉಜ್ವಲವಾದ ರಾಷ್ಟ್ರೀಯ ವಾತಾವರಣವು, ಬಾಲಕರಾದ ಬೇಂದ್ರೆಯವರ ಕೋಮಲವಾದ ಅಂತಃಕರಣದ ಮೇಲೆ ಸಂಸ್ಕಾರವನ್ನುಂಟುಮಾಡದೆ ಬಿಡಲಿಲ್ಲ"[೮] ಅಂತಹ ಪರಿಸರದಲ್ಲಿ ಬೆಳೆದ ಬೇಂದ್ರೆಯವರಿಗೆ ಸಾಹಿತ್ಯ, ಸಂಸ್ಕೃತಿ, ರಾಷ್ಟ್ರೀಯತೆ, ಕನ್ನಡ ಭಾಷಾಭಿಮಾನ ಸಹಜವಾಗಿ ಜೀವದ್ರವ್ಯವಾದವು. ಅವು ಅವರನ್ನು ಕವಿಯಾಗಿ ರೂಪಿಸಿದವು.

## (ಆ) ಕಾಲೇಜು ವಿದ್ಯಾಭ್ಯಾಸ ಹಾಗೂ ಕಾವ್ಯಚಿಂತನೆ

ಬೇಂದ್ರೆಯವರು ಚಿಕ್ಕಂದಿನಿಂದಲೂ ಕಷ್ಟದ ಜೀವನ ಸಾಗಿಸುತ್ತಿದ್ದಂತೆ ಅವರನ್ನು ಇನ್ನೂ ಹೆಚ್ಚು ಪರೀಕ್ಷೆಗೆ ಒಳಪಡಿಸುವಂತೆ ವಿಧಿ ಅವರನ್ನು ಕಾಡುತ್ತಿತ್ತು. ಅವರು ಮ್ಯಾಟ್ರಿಕ್ ಪರೀಕ್ಷೆ ಮುಗಿಸಿಬಂದ ಸಂಜೆ ತಮ್ಮ ಕುಟುಂಬದ ಆಧಾರವಾಗಿದ್ದ ಅಜ್ಜಿಯನ್ನು ಕಳೆದುಕೊಂಡರು. ತಾಯಿ ಮತ್ತು ಮಕ್ಕಳು ದಿಕ್ಕುತಪ್ಪಿದರು. ಆದರೆ ದೈವ ದೊಡ್ಡದು. ಅವರ ಚಿಕ್ಕಪ್ಪ ಬಂಡೋಪಂತ ಬೇಂದ್ರೆ ಪುಣೆಯಲ್ಲಿ ಉತ್ತಮ ಕೆಲಸದಲ್ಲಿದ್ದರು. ಅವರು ವಿಶಾಲ ಹೃದಯಿಗಳು. ಬೇಂದ್ರೆ ಪುಣೆಗೆ ಹೋಗಿ ೧೯೧೪ರಿಂದ ೧೯೧೮ ರವರೆಗೆ ಅಲ್ಲಿಯ ಫರ್ಗ್ಯುಸನ್ ಕಾಲೇಜಿನಲ್ಲಿ ಬಿ.ಎ. ಕಲಿತರು. ಅವರು ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿ 'ಶಾರದಾಮಂಡಲ' ಎಂಬ ಸ್ನೇಹಿತರಕೂಟ ನಿರ್ಮಿಸಿ ಸಾಹಿತ್ಯಾಧ್ಯಯನ ನಡೆಸಿದರು. ಚಿಕ್ಕಂದಿನಲ್ಲಿ ಕಂಠಪಾಠ ಮಾಡಿದ್ದ 'ಗಂಗಾಲಹರಿ', ಲಕ್ಷ್ಮೀಶನ ನಾದಮಾಧುರ್ಯ ಮತ್ತು ಸರ್ವಜ್ಞನ ಬಿಚ್ಚು

೮. ನಾ.ಶ್ರೀ.ರಾಜಪುರೋಹಿತ, 'ಮುಮುಕ್ಷು ಬೇಂದ್ರೆ'. ಚುಳಕಿಗೋವಿಂದರಾಯರು (ಸಂ) ಕವಿವರ ಬೇಂದ್ರೆ, ಪೂರ್ವೋಕ್ತ ಪು. ೬೦, ೬೧

ನುಡಿಗೆ ಅವರು ಪಕ್ಕಾಗಿದ್ದರು. ಪುಣೆಯ ವಾಸ್ತವ್ಯದಲ್ಲಿ ಕಾಳಿದಾಸನ 'ಶಾಕುಂತಲ', ಶಂಕರಾಚಾರ್ಯರ 'ಸೌಂದರ್ಯಲಹರಿ', ಜ್ಞಾನೇಶ್ವರರ 'ಜ್ಞಾನೇಶ್ವರಿ' ಅಭ್ಯಾಸ ಮಾಡಿದರು. ಶೇಕ್ಸ್‌ಪಿಯರ್, ಶೆಲ್ಲಿ, ಕೀಟ್ಸ್, ಎಮರ್ಸನ್, ಮೇಟರ್‌ಲಿಂಕರ ಆಂಗ್ಲ ಸಾಹಿತ್ಯವನ್ನು ಅಧ್ಯಯನ ಮಾಡಿದರು. ಬಾಬುರಾವ್ ಬಿಥೆಯವರಿಂದ ಹಿಂದಿ ಸಾಹಿತ್ಯ ಹಾಗೂ ಜ್ಯೋತಿಷ್ಯ ಶಾಸ್ತ್ರ ತಿಳಿದರು. ಹಿಂದಿ, ಮರಾಠಿ, ಇಂಗ್ಲೀಷ್, ಸಂಸ್ಕೃತ ಭಾಷೆಯ ಪಂಡಿತರಾದರು.

## (ಇ) ಗುರು ಚತುರ್ಮುಖ

ಬೇಂದ್ರೆಯವರು ಕವಿ ರವೀಂದ್ರನಾಥ ಠಾಗೂರ್, ಯೋಗಿ ಶ್ರೀ ಅರವಿಂದ, ಐರಿಷ್‌ಕವಿ ಜಾರ್ಜ್‌ರಸಲ್ (ಎ.ಈ), ಖಲೀಲ್ ಜಿಬ್ರಾನ್‌ರನ್ನು ತನ್ನ ನಾಲ್ವರು ಗುರುಗಳೆಂದು ಕರೆದುಕೊಂಡಿದ್ದಾರೆ. ಮೊದಲ ಇಬ್ಬರು ಗುರುಗಳನ್ನು ಕುರಿತು "ಉಭಯವು ಅಭಯವಾದುದನ್ನು ನನ್ನಿಬ್ಬರು ಗುರುಗಳಲ್ಲಿ ಕಂಡೆ ಎರಡು ಕಣ್ಣು ಒಂದುನೋಟ. ರವಿ ಉದಯದಿಂದ ಅರವಿಂದ ಅರಳಿತು"[೯] ಎಂದಿದ್ದಾರೆ. ಇನ್ನಿಬ್ಬರು ಗುರುಗಳ ಬಗ್ಗೆ "ಎ,ಈ ಕವಿ ನನ್ನ ಜೀವನದ ಲೋಲಕದಲ್ಲಿ ಕಿರಣದಂತೆ ಸೇರಿದ್ದಾನೆ, ಜಿಬ್ರಾನ ನನಗೆ ಎಣ್ಣೆ ಮಜ್ಜನ ಮಾಡಿಸಿ ಎರೆದು, ತೊಟ್ಟಿಲ ನಿದ್ರೆಯಲ್ಲಿಯೇ ಕನಸಿನ ಆಕಾಶಕ್ಕೆ ಎತ್ತೆತ್ತಿ ಒಯ್ದಿದ್ದಾನೆ".[೧೦] ಎಂದು ಸ್ಪಷ್ಟ ಪಡಿಸಿದ್ದಾರೆ.

ಬೇಂದ್ರೆಯವರು ರವೀಂದ್ರರ ಅಧ್ಯಯನದಿಂದ ತಮಗೆ ಎಚ್ಚರ ಹಾಗೂ ವಿವಿಧ ಬೋಧ ಉಂಟಾಯಿತು ಎಂದು ತಿಳಿಸಿದ್ದಾರೆ : "ವ್ಯಷ್ಟಿ–ಸಮಷ್ಟಿ ಪರಸ್ಪರ ಪೋಷಕ, ಪೂರಕ, ಪೂರ್ಣದಿಂದ ಪೂರ್ಣದತ್ತ ಪರಿವರ್ಧಿಸುವ ಸಂಬಂಧ ಎಂದು ಆಗದಿದ್ದರೆ, ಜೀವನವೇ ವಿಕೃತಿಯಾಗುತ್ತದೆ. ಈ ಎಚ್ಚರವನ್ನು ನನಗೆ ಮೊದಲು ಸ್ಪಷ್ಟವಾಗಿ ತಂದುಕೊಟ್ಟ ಸಾಹಿತಿ ರವೀಂದ್ರನಾಥ ಟಾಗೋರ. ಟಾಗೋರರ ಶಿಶುಕಾವ್ಯ, ಪ್ರಣಯಗೀತೆಗಳು, ಸಣ್ಣ ಕಥೆಗಳು, ಅವರ ನಾಟಕದೊಳಗಿನ ಮುದುಕರು, ಅವರ ಲೇಖನದೊಳಗಿನ ಸಂವಾದ ಸರಣಿ ಇವೆಲ್ಲವೂ ನನಗೆ ವಿವಿಧ ಬೋಧ ತಂದಿದೆ."[೧೧] ಬೇಂದ್ರೆಯವರು ೧೯೧೭ರಲ್ಲಿ ಶ್ರೀ ಅರವಿಂದರ 'ಆರ್ಯ' ಪತ್ರಿಕೆಯನ್ನು ಮೊದಲು ಕಂಡು, ಅದರಲ್ಲಿಯ ಗೀತೆಯ ಬಗೆಗಿನ ಚಿಂತನೆಗಳಿಂದ ಪ್ರಭಾವಿತರಾದರು. ಅನಂತರ ಶ್ರೀ ಅರವಿಂದರ ಚಿಂತನೆಯಲ್ಲಿ ಮುಳುಗಿ ಹೋದರು.

ಅವರು 'ಏ ಈ' ಯವರ Avatars, candle of vision, Interpreters. Nationalbeing, Voices of Stones ಗಳನ್ನು ಅಧ್ಯಯನ ಮಾಡಿದರು. ಖಲೀಲ್ ಜಿಬ್ರಾನ್‌ನ Prophet, Jesus of MAN ಕೃತಿಗಳನ್ನು ಓದಿ ಈ ಇಬ್ಬರೂ ಚಿಂತಕರ

---

೯. ದ.ರಾ.ಬೇಂದ್ರೆ, ಸಾಹಿತ್ಯದವಿರಾಟ್‌ಸ್ವರೂಪ, ಪೂರ್ವೋಕ್ತ, ಪು. ೧೦೩
೧೦. ಅದೇ, ಪುಟ. ೯೮
೧೧. ಅದೇ, ಪುಟ. ೧೧೬

ಬಗ್ಗೆ 'ಗೆಳೆಯರಗುಂಪಿ'ನ ಮಧುರಚೆನ್ನ, ವಿ.ಕೃ.ಗೋಕಾಕ್ ಮುಂತಾದ ಗೆಳೆಯರೊಡನೆ ಆಳವಾದ ಚಿಂತನೆ ನಡೆಸಿದರು. ಅವರು ಮತ್ತು ಅವರ 'ಗೆಳೆಯರು ಅಯರಿಶ್ ಬ್ರ್ಯಾಂಚಾಗಲಿಲ್ಲ; ಥಿಯಾಸೋಫಿ ಬ್ರ್ಯಾಂಚಾಗಲಿಲ್ಲ; ಕನ್ನಡದ ಸ್ವಂತದ ಶಕ್ತಿ ಬೆಳೆಸುವುದೇ ಅವರ ಧ್ಯೇಯ ಧ್ಯಾನ ಆಗಿತ್ತು'[೧೨] ಬೇಂದ್ರೆಯವರು ವಿಶ್ವದ ಎಲ್ಲ ಸಾಹಿತ್ಯವನ್ನು ಅಧ್ಯಯನ ಮಾಡಿ ಜೀರ್ಣಿಸಿಕೊಂಡು ಅವುಗಳ ಸತ್ತ್ವವನ್ನು ಕನ್ನಡವಾಗಿಸಿದರು.

'ಜಿಬ್ರಾನ್ ನಿತಾಂತ ಮಾತೃಭಕ್ತ. ಅವನ ತಾಯಿ ಮಗನಲ್ಲಿ ಜ್ಯೋತಿ ಕಂಡ ವತ್ಸಲೆ'[೧೩] ಯಾದುದರಿಂದ 'ಅಂಬಿಕಾತನಯದತ್ತ'ರು ಜೀಬ್ರಾನ್ ಹಾಗೂ ತನ್ನ ಎಳೆ ಒಂದೆ ತಂತಿನದು ಎಂದು ತಿಳಿದರು.

## (ಈ) ಕವನ ರಚನೆಯ ಪ್ರಾರಂಭ ಹಾಗೂ ವಿಕಾಸ

ಬೇಂದ್ರೆಯವರು ೧೯೧೨ ರಿಂದಲೇ ಕನ್ನಡ ಹಾಗೂ ಮರಾಠಿಗಳಲ್ಲಿ ಕವನ ರಚನೆ ಮಾಡುತ್ತಿದ್ದರು. ಅವರು ಪರ್ಗ್ಯುಸನ್ ಕಾಲೇಜಿನಲ್ಲಿ ಕಲಿಯುವಾಗ 'Ben Ramson' ಎಂದು ಇಂಗ್ಲಿಷ್‌ನಲ್ಲಿ ಕವಿತೆಗಳನ್ನು ರಚಿಸಿದ್ದರು. ಅವರ ಪ್ರಥಮ ಪ್ರಕಟಿತ ಕವನಗಳು 'ತುತೂರಿ' ಮತ್ತು 'ಸರಸ್ವತಿ'. ಅವು 'ಪ್ರಭಾತ' ಪತ್ರಿಕೆಯ ೧೯೧೮ ಆಗಸ್ಟ್‌ನ ಪ್ರಥಮ ಸಂಚಿಕೆಯಲ್ಲಿ 'ಅಂಬಿಕಾತನಯದತ್ತ' ಕಾವ್ಯನಾಮದಿಂದ ಪ್ರಕಟವಾದವು. 'ತುತೂರಿ' ಯಲ್ಲಿ ಕಾವ್ಯ ಮೊಳಗಿಸುವ ಧ್ವನಿ, ನಾಡುನುಡಿಯ ಅಭಿಮಾನ, ನಾಡಿಗರನ್ನು ಎಚ್ಚರಿಸುವ ನುಡಿಗಳಿವೆ. ಅದು ಕನ್ನಡಿಗರ ಮಂಗಲನಾದವಾಗಿ ಹೊಮ್ಮಿದೆ. ಆ ಕವಿತೆಯ ರಚನೆಯನ್ನು ಕುರಿತು ಕವನದ ಪ್ರಾರಂಭದಲ್ಲಿ ಅವರು "ಈ ಕವಿತೆಯನ್ನು ಮಹಾರಾಷ್ಟ್ರಕವಿ ಕೇಶವಸುತ ಇವರ 'ತುತೂರಿ'ಯ ಹೆಸರನ್ನು ಕೇಳಿ ಬರೆದೆನೇ ಹೊರತು ಅದನ್ನು ನಾನು ಓದಿಲ್ಲ" ಎಂದು ತಿಳಿಸಿದ್ದಾರೆ.

೧೯೧೯ರ 'ಸ್ವಧರ್ಮ' ಪತ್ರಿಕೆಯಲ್ಲಿ ಬೆಳಕುಕಂಡ 'ಬೆಳಗು' ಕವನ ಅವರ ನೂತನ ಛಂದಃ ಪ್ರಯೋಗದಿಂದ ಕೂಡಿ ಹೊಸಕಾವ್ಯದ ಉದಯವನ್ನು ಕನ್ನಡದಲ್ಲಿ ಉಂಟುಮಾಡಿತು. ಆ ಹೊಸತು ಜನಕ್ಕೆ ಮೆಚ್ಚುಗೆ ಆಗುವುದೊ ಇಲ್ಲವೊ ಎಂದು 'ಸದಾನಂದ ಜಂಗಮ' ಎಂಬ ಕಾವ್ಯನಾಮದಲ್ಲಿ ಅದನ್ನು ಬರೆದಿದ್ದರು. ಅನಂತರ ಅವರು 'ತುತೂರಿ' ಮತ್ತು 'ಸರಸ್ವತಿ' ಕವನಗಳಲ್ಲಿಯ 'ಅಂಬಿಕಾತನಯದತ್ತ' ರಾಗಿಯೇ ಕನ್ನಡದಲ್ಲಿ ಮೆರೆದರು.

---

೧೨. ದ.ರಾ.ಬೇಂದ್ರೆ, ಸಾಹಿತ್ಯದವಿರಾಟ್‌ಸ್ವರೂಪ, ಪೂರ್ವೋಕ್ತ, ಪು. ೯೫
೧೩. ಅದೇ, ಪುಟ. ೧೧೬

## (ಉ) ಹೊಸಛಂದಸ್ಸು

ಬೇಂದ್ರೆಯವರು "ಭಾವಗೀತೆಗಳಲ್ಲಿ ನಾನು ಗತಾನುಗತಿಕ ಷಟ್ಪದಿಗಳನ್ನು ಬಳಸಿದೆ, ಸಂಗಡವೇ ಹೊಸಛಂದಸ್ಸುಗಳ ಪ್ರಯೋಗವನ್ನು ಮಾಡಿದೆ. ಮುಂದೆ ಮಾಸ್ತಿಯವರಿಗೂ ನನಗೂ ಗಹನ ಸ್ನೇಹಕ್ಕೆ ದಾರಿಮಾಡಿಕೊಟ್ಟ, ಮೊದಲು 'ಸ್ವಧರ್ಮ'ದಲ್ಲಿ ಬೆಳಕುಕಂಡ ಮತ್ತು 'ಗರಿ'ಯಲ್ಲಿ ಪ್ರಥಮ ಪದ್ಯವಾಗಿ ಮುದ್ರಿತವಾದ 'ಬೆಳಗು' (ಮೂಡಲಮನೆಯ ಮುತ್ತಿನ ನೀರಿನ) ಕವಿತೆಯೇ ಬಹುಶಃ ನನ್ನ ಮೊದಲ ನೂತನ ಛದಃ ಪ್ರಯೋಗ (೧೯೧೯). ಇದು ಹೊಸಛಂದಸ್ಸು...ಬಹುಶಃ ಇಕ್ಕಟ್ಟಾದ ಮಾತ್ರಮಿತಿಗಳುಳ್ಳ ಷಟ್ಪದಿಗಳು ನನ್ನ ಸ್ವಾಭಾವಿಕ ಸ್ವಾತಂತ್ರ್ಯಪ್ರಿಯ ಆತ್ಮಕ್ಕೆ ಹಿಡಿಸಿರಲಿಕ್ಕಿಲ್ಲ. ಧಾರವಾಡದಲ್ಲಿ ಯಾವಾಗಲೂ ಕಿವಿದೆರೆದು ಓಡಾಡುವ ನನಗೆ ದಾಸರ ಪದದಿಂದ, ಗೊಲ್ಲರ ಹಾಡಿನವರೆಗೆ ಎಲ್ಲವನ್ನೂ ಕೇಳಿ, ಕೇಳಿ, ಒಂದು ಸಂಸ್ಕಾರ ಬಂದಿರಬೇಕು. ಸಾಂಗತ್ಯ ಮತ್ತು ಲೋಕಗೀತೆಗಳ ಅಂಶಗಣಗಳು ಕೊಡುವ ಸ್ವಾತಂತ್ರ್ಯ, ಮಾಧುರ್ಯಗಳು ರಕ್ತಗತವಾಗಿರಬೇಕು. ಇವೆಲ್ಲ ಸೇರಿ ಛಂದಸ್ಸುಗಳಲ್ಲಿ ನವನವೋನ್ಮೇಷಣೆ ನನಗೆ ಸಾಧ್ಯವಾಗಿರಬೇಕು"[೧೪] ಎಂದು ಹೇಳಿದ್ದಾರೆ. ಅವರು ಜನಪದ ಮತ್ತು ಶಿಷ್ಟ ಆಲೋಚನೆ ಮತ್ತು ಶೈಲಿಯನ್ನು ತನ್ನದಾಗಿಸಿಕೊಂಡು ಅದರ ಸಕೃತ್‌ಫಲದಂತೆ ತಮ್ಮ ಕಾವ್ಯ ಛಂದಸ್ಸನ್ನು ರೂಪಿಸಿಕೊಂಡಿದ್ದಾರೆ. ಅವರ ಪ್ರತಿ ಕವನದಲ್ಲಿಯೂ ಹೊಸ ಹೊಸ ಛಂದಶ್ಶರೀರವಿದೆ. ಭಾವಲಹರಿಗೆ ತಕ್ಕಂತೆ ಛಂದಸ್ಸಿನ ಸೃಷ್ಟಿಯಾಗಿದೆ.

## (ಊ) ಹೊಸಶೈಲಿ

ಪ್ರತಿಯೊಬ್ಬ ಕವಿಯೂ ತನ್ನದೇ ಆದ ಶೈಲಿಯಲ್ಲಿ ನುಡಿಯುತ್ತಾನೆ. ಅದು ಅವನ ಕಾವ್ಯ ಭಾಷೆ, ಅದು ಅವನ ಕಂಠದ ದನಿಯಂತೆ ಅತಿ ಸಹಜವಾದುದು. ಅದು ಅವನದೇ. ಹಾಗೇ ಬೇಂದ್ರೆ ಶೈಲಿ ತನ್ನದೇ ಆದ ಪಾಂಗಿನಿಂದ ಕೂಡಿದೆ. ಜಾನಪದರ ಗ್ರಾಮೀಣತೆ, ಸರಳತೆ, ನಾದ, ಲಯದ ಕುಣಿತ ಆನಂದದ ಭಾಗವಾದ ಬೇಂದ್ರೆಯವರು ಜಾನಪದ ಭಾಷೆಯನ್ನು ಶಿಷ್ಟಕಾವ್ಯವನ್ನು ಕಸಿಗೊಳಿಸಲು ಬಳಸಿದ್ದಾರೆ. ಅವರ ಕಾವ್ಯದಲ್ಲಿ ಜಾನಪದ ಭಾಷೆ ಶಿಷ್ಟದ ನಿಯೋಗಕ್ಕೆ ಒಳಗಾಗಿದೆ. ಅವರ ಛಂದಸ್ಸು ಸ್ಫೂರ್ತವಾಗಿ ಹೊಮ್ಮಿಬಂದಂತೆ ಶೈಲಿಯು ಅತಿ ಸಹಜವೆಂಬಂತೆ "ಭೃಂಗದ ಬೆನ್ನೇರಿಬಂತು ಕಲ್ಪನಾವಿಲಾಸ ಮಸೆದಗಾಳಿ ಪಕ್ಕಪಡೆಯುತಿತ್ತು ಸಹಜ ಪ್ರಾಸ" ಎಂಬ ಅವರ ಸ್ಫೂರ್ತಕಾವ್ಯದಂತೆ ಜೊತೆ ಜೊತೆಗೆ ಹೊಮ್ಮಿಬಂದಿದೆ.

---

೧೪. ದ.ರಾ.ಬೇಂದ್ರೆ, 'ಸಾಹಿತ್ಯ ಮತ್ತು ಸಾರ್ಥಕತೆ' ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ ಶ್ರೀಮಾತಾಪ್ರಕಾಶನ, ಧಾರವಾಡ, ೧೯೯೮ ಪು. ೮೦

ಅದನ್ನು ಅವರು ಹೀಗೆ ವ್ಯಕ್ತಪಡಿಸಿದ್ದಾರೆ. "ನನ್ನ ಜನಪದ ಶೈಲಿಯ ಮಾತೂ ಅಷ್ಟೆ. ನನ್ನ ಕಿವಿಗೆ ನಾನೇ ಪ್ರಮಾಣ. 'ಗ್ರಾಂಥಿಕ' ಎನಿಸುವ ಶೈಲಿಯಲ್ಲಿ ಬರೆದಾಗಲೂ ಜನಪದದ ಹಸುರು ಮಾತುಗಳು ಅಲ್ಲಲ್ಲಿ–ಮೊದಲಿನಿಂದಲೂ–ತಾವಾಗಿಬರುತ್ತವೆ. ಅದನ್ನು ಹೊರದಬ್ಬಲು ನಾನು ಇಷ್ಟಪಡುವುದಿಲ್ಲ. ಯಾವುದಕ್ಕೆ ಯಾವ ಶೈಲಿ ಯೋಗ್ಯವೋ ಆ ಶೈಲಿಯಲ್ಲಿ ನನ್ನ ಹಾಡು ತಾನಾಗಿ ಬರುತ್ತದೆ." [೧೫]

## (೩) ಬೇಂದ್ರೆ ಮಾಸ್ತರು

ಬೇಂದ್ರೆಯವರು ಬಿ.ಎ. ಪರೀಕ್ಷೆಯ ಫಲಿತಾಂಶ ತಿಳಿಯುವ ಮೊದಲೇ ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನ ಶಿಕ್ಷಕರಾದರು. ಶಿಕ್ಷಕರಾಗಿ ಜೀವನಕ್ಕೆ ಒಂದು ಆಧಾರ ದೊರಕಿದ ಕಾರಣ ಪುಣೆಗೆ ಹೋಗಿ ತಾಯಿಯನ್ನು ಕರೆದುಕೊಂಡು ಬಂದು ಧಾರವಾಡದ ಕಾಮನಕಟ್ಟೆಯಲ್ಲಿ ಮತ್ತೆ ಮನೆಮಾಡಿದರು. ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಮೂರುವರ್ಷ, ಅನಂತರ ರಾಷ್ಟ್ರೀಯ ಶಾಲೆಯಲ್ಲಿ ಮೂರುವರ್ಷ ದುಡಿದರು. ೧೯೧೯ರಲ್ಲಿ ತಾಯಿಯು ಒಪ್ಪಿತಂದ ರಂಗೂಬಾಯಿಯವರನ್ನು ಹುಬ್ಬಳ್ಳಿಯಲ್ಲಿ ವಿವಾಹವಾದರು. ಅವರು ಮಹಾರಾಷ್ಟ್ರೀಯರ ಸಂಪ್ರದಾಯದಂತೆ ಪತಿಯ ಮನೆಯಲ್ಲಿ ಲಕ್ಷ್ಮೀಬಾಯಿ ಎಂಬ ಹೊಸ ಹೆಸರಿನಿಂದ ಕರೆಯಲ್ಪಟ್ಟರು. ಲಕ್ಷ್ಮೀಬಾಯಿಯವರು 'ಸಖೀಗೀತ'ದ ನಾಯಕಿಯಾಗಿ ಬೇಂದ್ರೆಯವರ 'ನನಗೂ ನಿನಗೂ ಅಂಟಿದ ನಂಟಿನ ಕೊನೆಬಲ್ಲವರಾರು ಕಾಮಕ್ಷಿಯೇ' ಎಂಬ ತಾತ್ವಿಕ ಚಿಂತನೆಗೆ ಕಾರಣರಾದರು.

ಶಾಲಾ ಶಿಕ್ಷಕರಾದ ಬೇಂದ್ರೆಯವರು ಬಡತನದಲ್ಲಿಯೇ ಜೀವನ ಸಾಗಿಸುತ್ತಿದ್ದರು. ಅವರ ಆದರ್ಶ ಬದುಕಿಗೆ ನೆರವಾಗಿ, ಸಾಹಿತ್ಯಶಕ್ತಿಗೆ ಇಂಬುಗೊಟ್ಟು ಸಂಸಾರ ನಡೆಸಿದ ಶ್ರೇಯಸ್ಸು ಲಕ್ಷ್ಮೀಬಾಯಿಯವರದಾಗಿದೆ. ಬೇಂದ್ರೆಯವರಿಗೆ ಕಾವ್ಯದ ಸಿರಿತನದಲ್ಲಿ ಬದುಕಿನ ಬಡತನ ಸಿರಿತನವೆಂಬುದು ಅಷ್ಟು ಮುಖ್ಯವಾಗಿರಲಿಲ್ಲ. "ಶಿಕ್ಷಕರ ಬಡ ಸಂಸಾರ ನಿರ್ವಿಘ್ನವಾಗಿಸಾಗಿತು. ಬಡ ಸಂಸಾರ ಎಂಬ ಭಾವನೆಯೇ ಬೇಂದ್ರೆಯವರಿಗೆ ಬರಲಿಲ್ಲ. ಏಕೆಂದರೆ ಶ್ರೀಮಂತತನ ಅವರಿಗೆ ಬೇಕಾಗಿರಲಿಲ್ಲ. ಊಟಕ್ಕೆ ಇರದಿದ್ದರೆ ಉಪವಾಸ ಮಾಡಿದರೇನು ತಪ್ಪು, ಉಪವಾಸ ವ್ರತವನ್ನೂ ಸಾಧಿಸಿದಂತೆ ಆಯಿತು ಎಂಬುದೆ ಅವರ ಜೀವನ ದೃಷ್ಟಿ"[೧೬] ಎಂದು ವಾಮನ ಬೇಂದ್ರೆಯವರು ತಿಳಿಸಿದ್ದಾರೆ.

---

೧೫. ದ.ರಾ.ಬೇಂದ್ರೆ, 'ಸಾಹಿತ್ಯ ಮತ್ತು ಸಾರ್ಥಕತೆ' ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ ಶ್ರೀಮಾತಾಪ್ರಕಾಶನ, ಧಾರವಾಡ, ೧೯೮೮ ಪು. ೮೧

೧೬. ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಶ್ರೀಮಾತಾಪ್ರಕಾಶನ. ಧಾರವಾಡ. ೧೯೯೦. ಪು.೨೬

ಬೇಂದ್ರೆಯವರ ದಾಂಪತ್ಯದ ಫಲವಾದ ಒಂಬತ್ತು ಮಕ್ಕಳಲ್ಲಿ ಉಳಿದವರು ಇಬ್ಬರು ಗಂಡುಮಕ್ಕಳಾದ ಪಾಂಡುರಂಗ ಮತ್ತು ವಾಮನ, ಒಬ್ಬ ಹೆಣ್ಣು ಮಗಳು ಮಂಗಳ. ಇಂದು ವಾಮನ ಮತ್ತು ಮಂಗಳ ಇದ್ದಾರೆ. ಇಂದೂ ಆರೋಗ್ಯವಾಗಿದ್ದಾರೆ. ಅವರು ಕಳೆದುಕೊಂಡ ಮಕ್ಕಳನ್ನು ಕುರಿತು ಹಾಡಿದ 'ಕರುಳಿನ ವಚನಗಳು' 'ಹಾಡುಪಾಡು' ಹಾಗೂ ಹಲವಾರು ಕವನಗಳು ಮನುಜನ ವಾತ್ಸಲ್ಯ ಅರಳಿದ ಲೋಕಗೀತಗಳಾಗಿವೆ.

## (ಋಾ) ಅಂಬಿಕಾತನಯದತ್ತ

ಬೇಂದ್ರೆಯವರು ಚಿಕ್ಕಂದಿನಲ್ಲಿ ತಂದೆಯನ್ನು ಕಳೆದುಕೊಂಡು ಈ ಪ್ರಪಂಚ ಏನು ಎನ್ನುವ ಅರಿವು ಬರುವಾಗ್ಗೆ ಹೆಜ್ಜೆ ಹೆಜ್ಜೆಗೆ ಅವರನ್ನು ತಿದ್ದಿ ಮಿದ್ದಿ ಮನುಷ್ಯನನ್ನಾಗಿ ಮಾಡಿದವಳು ತಾಯಿ ಅಂಬವ್ವ. ಆಕೆಯು ಎದೆಗುಂದದೆ ಬಂದ ಕಷ್ಟವನ್ನು ಎದುರಿಸುತ್ತಾ ಧೈರ್ಯದಿಂದ ಜೀವನ ನಡೆಸುತ್ತಿದ್ದಳು. ಆ ತಾಯಿ ೧೯೨೪ರಲ್ಲಿ ಕಾಮನಕಟ್ಟಿಯಲ್ಲಿ ತೀರಿಕೊಂಡಳು. ಬೇಂದ್ರೆಯವರಿಗೆ ಆಘಾತವಾದಂತಾಯಿತು. ಅವರು ಅನಾಥ ರಂತಾದರು. ಅವರ ಕಾವ್ಯ ಅನುಭಾವದ ಸ್ತರ ಪಡೆಯಲು ಸಾಧ್ಯವಾದದ್ದು ಅವರ ತಾಯಿಯಿಂದ. ಅವರು ತಾಯಿ ಎಂಬ ಎರಡಕ್ಷರದಲ್ಲಿ ಇಡೀ ವಿಶ್ವವನ್ನು ಅರಿಯಲು ಸಾಧ್ಯಮಾಡಿಕೊಂಡರು. 'ತಾಯಿ ನೀನಲ್ಲದೆ ದೇವನಾವ' ಎಂಬ ಚಿಂತನದಲ್ಲಿ ತೊಡಗಿದ್ದರು.

ಅವರು ತಾಯಿಯನ್ನು ಕುರಿತು "೧. ದೇಹಕೊಟ್ಟತಾಯಿ, ೨. ಮಾತುಕಲಿಸಿದ ತಾಯಿ ೩. ಸಂಸ್ಕಾರ ಸಂಪನ್ನ ಮಾಡಿದ ತಾಯಿ, ೪. ಭೂಮಂಡಲದ ಮಾನವತೆಯಲ್ಲಿ ನೆಲೆಸಿದ ತಾಯಿ, ೫. ವಿಶ್ವೋದರದಲ್ಲಿ ಧರಿಸಿದ ತಾಯಿ. ಈ ಐದು ಐದೆಯರು ದತ್ತನ ತಾಯಂದಿರು. ಇದು ಪಂಚಕೋಶಗರ್ಭ. 'ಅಂಬಿಕೆ'ಯತೊಡೆ, ಹೊಟ್ಟೆ, ಎದೆ, ಕೊರಳು, ತುಟಿ, ಕಣ್ಣು– ಒಂದೊಂದರಲ್ಲಿಯೂ ಈ ಮಹಾಸ್ಪರ್ಶವಿತ್ತು. ಆದರೆ ಆಕೆಯ ದೀಕ್ಷೆಯಲ್ಲಿ ಅನಂತ ಸಹನೆ ಇತ್ತು. ಯುಗ ಯುಗದ ನೋಂಪಿಯ ಕಂಪಿತ್ತು. ತಂದೆಯ, ಅವನ ಬಳಗದ, ನಿಕಟಸಾನ್ನಿಧ್ಯದಿಂದ ವಂಚಿತನಾದ ನಾನು; ನನ್ನ ತಾಯಿ, ತಾಯಿಯತಾಯಿ, ಆಕೆಯ ತಾಯಿ ಇವರ ಪ್ರತ್ಯಕ್ಷ ಚಾರಿತ್ರದಲ್ಲಿ ಪೌರುಷವನ್ನು ಕಂಡೆ"[೧೭] ಎಂದು ನುಡಿದಿದ್ದಾರೆ. ಇದು ಅವರಿಗೆ ಅಜ್ಜಿ ಮತ್ತು ತಾಯಿಯವರಿಂದ ಉಂಟಾದ ಮಾತೃತ್ವದ ಅನುಭವ. ಸಾಹಿತ್ಯದ ನೆಲೆಯಿಂದ ರವೀಂದ್ರನಾಥ ಟಾಗೂರರನ್ನು ನೆನೆಯುತ್ತ "ನನ್ನ ತಾಯಿಯ ಎಚ್ಚರ ನನಗೆ ತಂದದ್ದು ಅವರ ಶಿಶುಕಾವ್ಯ" ಎಂದಿದ್ದಾರೆ. ಅಧ್ಯಾತ್ಮ ನೆಲೆಯಿಂದ ಅವರಿಗೆ ದೊರೆತ ಪ್ರೇರಣೆ ಅರವಿಂದಾಶ್ರಮದ ಶ್ರೀಮಾತೆಯವರಿಂದ. ಅದನ್ನು ಅವರು 'ಪಾಂಡಿಚೇರಿಯ ಶ್ರೀಮಾತೆಯವರ ದರ್ಶನವಾದ ಮೇಲಂತೂ ಎಲ್ಲ ತಾಯ್ತನವನ್ನು ಎತ್ತಿ ಹಿಡಿಯುವ ಆಧಾರವೇ ಕಂಡಂತಾಯಿತು' ಎಂದು ತಿಳಿಸಿದ್ದಾರೆ.

---

೧೭. ದ.ರಾ.ಬೇಂದ್ರೆ, 'ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. ೫೦

ಬೇಂದ್ರೆಯವರು ತಮ್ಮ ಕಾವ್ಯದ ಕೇಂದ್ರ ಪ್ರತಿಮೆ ತಾಯಿಯಾದುದರಿಂದ ತಮ್ಮ ಕಾವ್ಯನಾಮವನ್ನು 'ಅಂಬಿಕಾತನಯದತ್ತ' ವೆಂದಿಟ್ಟುಕೊಂಡರು. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಓರ್ವ ಶ್ರೇಷ್ಠ ಕವಿಯಾಗಿ ತನ್ನ ತಾಯಿಯ ಹೆಸರಿನ ಕಾವ್ಯನಾಮವನ್ನಿಟ್ಟು ಕೊಂಡ ಮೊದಲಿಗರು ದ.ರಾ.ಬೇಂದ್ರೆ. 'ಅಂಬಿಕೆ' ಅವರಿಗೆ ತನ್ನ ತಾಯಿಯಂತೆ ವಿಶ್ವ ಮಾತೆಯೂ ಆದುದರಿಂದ ಆ ಶಕ್ತಿ ತನ್ನನ್ನೂ ಈ ಜಗತ್ತನ್ನೂ ನಡೆಸುತ್ತಿದೆ ಎಂದು ಭಾವಿಸಿದರು. ಅವರು ನಮ್ಮ ಭಾರತೀಯ ಕಾವ್ಯಪರಂಪರೆಯ ಭಕ್ತಕವಿಗಳಾದ ಶರಣರು, ದಾಸರು ತಮ್ಮ ಕಾವ್ಯದಲ್ಲಿ 'ಅಂಕಿತನಾಮ'ವನ್ನು ಬಳಸಿದಂತೆ 'ಅಂಬಿಕಾತನಯದತ್ತ' ವನ್ನು ಅಂಕಿತವಾಗಿಯೂ ಬಳಸಿದರು. ಅವರು 'ಅಂಕಿತ'ವಾಗಿ ಸೂಚಿಸಿರುವ ಕಾವ್ಯದಲ್ಲಿ ಅನುಭಾವದ ಸ್ಪರ್ಶವಿದೆ.

ಅಂಬಿಕಾತನಯನ ಜಂಬದ ಪಾಡಳಿದು
ನಂಬಿಗೆಯ ಹಾಡಾಗಿ ಬಂತಿಲ್ಲಿಗೆ

ದೃಢವಾದ ನಂಬಿಕೆ, ಶ್ರದ್ಧೆ, ಸಮರ್ಪಣ ಮತ್ತು ನಿಷ್ಠೆ ಅರವಿಂದರ ತತ್ವಜ್ಞಾನದ ಪ್ರಮುಖ ಭಾವಗಳಾಗಿವೆ. ಭಗವಂತನಿಗೆ ಸಂಪೂರ್ಣ ಸಮರ್ಪಣೆ ಎಂದಾಗ ಬರೀದೇಹ, ಪ್ರಾಣ, ಮನಸ್ಸು ಹೃದಯವಲ್ಲ; ಅವುಗಳನ್ನು ಪೂರ್ಣವಾಗಿ ಅರ್ಪಿಸುವುದು. ಅದು ಬೇಂದ್ರೆ ಕಾವ್ಯತತ್ವ

## (ಎ) ಜೀವನ ಸಂಘರ್ಷ ಮತ್ತು ಕಾವ್ಯ

ಬೇಂದ್ರೆಯವರದು ಸ್ವತಂತ್ರ ಪ್ರವೃತ್ತಿಯ, ನಿಷ್ಠುರ ಜೀವನ ಶೈಲಿಯಾಗಿತ್ತು. ಹಾಗಾಗಿ ಅವರು ಹಲವಾರು ಶಾಲೆಗಳಲ್ಲಿ ತಾತ್ಕಾಲಿಕವಾಗಿ ದುಡಿಯಬೇಕಾಯಿತು. ಅವರು 'ಗೆಳೆಯರಗುಂಪು' ಕಟ್ಟಿ ಸಾಹಿತ್ಯ ಸೃಷ್ಟಿ, ಸಾಹಿತ್ಯ ಪ್ರಸಾರ, 'ಜಯಕರ್ನಾಟಕ' ಪತ್ರಿಕಾಸಂಪಾದಕತ್ವವನ್ನು ನಡೆಸಿದರು. ಸಾಹಿತ್ಯದ ಆದರ್ಶದಡಿಯಲ್ಲಿ ವೈಯಕ್ತಿಕ ಸಂಸಾರದ ಸುಖ ದುಃಖಕ್ಕೆ ಜಾಣಕಿವುಡಾದರು. ೧೯೨೨ರಲ್ಲಿ ಅವರ 'ಕೃಷ್ಣಾಕುಮಾರಿ' ಷಟ್ಪದಿ ಕಾವ್ಯ ಪ್ರಕಟವಾಯಿತು. ೧೯೩೨ರಲ್ಲಿ ಅವರ ಪ್ರಥಮ ಕವನ ಸಂಕಲನ 'ಗರಿ' ಪ್ರಕಟವಾಯಿತು. ಆ ಸಂಗ್ರಹದೊಳಗಿನ ಸ್ವಾತಂತ್ರ್ಯ ಸ್ಫೂರ್ತಿಯ 'ನರಬಲಿ' ಕವನ ಅವರನ್ನು ಜೇಲಿಗೆ ಕಳಿಸಿತು. ಬ್ರಿಟೀಷ್ ಸರ್ಕಾರ ಅವರನ್ನು ಮೂರು ತಿಂಗಳು ಬೆಳಗಾವಿಯ ಹಿಂಡಲಗ ಜೇಲಿನಲ್ಲಿಯೂ, ಒಂಬತ್ತು ತಿಂಗಳು ಧಾರವಾಡದ ಹತ್ತಿರ ಮುಗದ ಎಂಬ ಹಳ್ಳಿಯಲ್ಲಿ ನಜರ್‌ಬಂಧಿ ಶಿಕ್ಷೆಯಲ್ಲಿಯೂ ಇಟ್ಟಿತು. ಆ ನಜರ್‌ಬಂದ್ ಶಿಕ್ಷೆಯ ಅವಧಿಯಲ್ಲಿ ಮುಗದದ ದುರ್ಗಾದೇವಿ ದೇವಾಲಯದಲ್ಲಿ ಕುಳಿತು ರಚಿಸಿದ 'ಭಾವಗೀತೆ' ಕಾವ್ಯ ಸೃಷ್ಟಿಯ ಬೆರಗನ್ನು ಕಂಡರಿಸಿದ ಶ್ರೇಷ್ಠ ಕವನ. ಆ ನಜರ್‌ಬಂಧ್ ಸೆರೆಯಿಂದ ೧೯೩೩ರಲ್ಲಿ ಬಿಡುಗಡೆಯಾಗಿ ಧಾರವಾಡಕ್ಕೆ ಬಂದರು.

ಇದ್ದ ಮೇಷ್ಟರ ಕೆಲಸ ಹೋಗಿ ಬೇರೆ ಯಾರೂ ಅವರನ್ನು ಕೆಲಸಕ್ಕೆ ತೆಗೆದುಕೊಳ್ಳಬಾರದೆಂದು ಸರ್ಕಾರದ ಆದೇಶವಿದ್ದ ಕಾರಣ ಅವರು ಎಂ.ಎ. ಪರೀಕ್ಷೆಯ ಅಭ್ಯಾಸಕ್ಕಾಗಿ ೧೯೩೩ರಲ್ಲಿ ಅವರ ಚಿಕ್ಕಪ್ಪನವರ ಮನೆ ಪುಣೆಗೆ ಹೋದರು. ೧೯೩೫ರಲ್ಲಿ ಎಂ.ಎ. ಪಾಸಾದರು. ಆದರೆ ವಿಧಿಯ ಆಟವೆಂಬಂತೆ ಆಶ್ರಯದಾತ ಚಿಕ್ಕಪ್ಪನನ್ನು ಅದೇ ವರ್ಷ ಕಳೆದುಕೊಂಡರು. ಪುಣೆಯಿಂದ ಸಂಸಾರ ಸಮೇತ ಮತ್ತೆ ಧಾಡವಾಡಕ್ಕೆ ಬಂದಾಗ ಅವರಿಗೆ ನೌಕರಿ ಇರಲಿಲ್ಲ. ೧೯೩೬ ರಿಂದ ೧೯೪೪ರವರೆಗೆ ಸ್ಥಿರವಾದ ನೌಕರಿ ಇಲ್ಲದೆ ಅಲೆದಾಡಿದರು. ಆ ಅವಧಿಯಲ್ಲಿ ವಿಶಾಲ ಹೃದಯಿ ಮಾಸ್ತಿ ವೆಂಕಟೇಶಯ್ಯಂಗಾರ್ಯರು ಬೇಂದ್ರೆಯವರನ್ನು ತಮ್ಮನಂತೆ ನೋಡಿಕೊಂಡರು. ಬೇಂದ್ರೆಯವರನ್ನು 'ಜೀವನ' ಪತ್ರಿಕೆಯ ಸಂಪಾದಕರನ್ನಾಗಿ ನೇಮಿಸಿದರು. ನೋವು ನಲಿವಿನ: ದ್ವಂದ್ವ ಸಂಘರ್ಷಗಳ ನೆಲೆರಹಿತ ಜೀವನಸ್ಥಿತಿಯಲ್ಲಿ ಒಂಬತ್ತು ಮಕ್ಕಳು ಹುಟ್ಟಿ ಮೂರು ಜನ ಮಾತ್ರ ಉಳಿದರು. ಆ ಸಂಕೀರ್ಣ ಮನಸ್ಥಿತಿಯಲ್ಲಿ 'ಗರಿ' (೧೯೩೨), ಮೂರ್ತಿ ಮತ್ತು ಕಾಮಕಸ್ತೂರಿ' (೧೯೩೪), ಸಖೀಗೀತ (೧೯೩೭), ಉಯ್ಯಾಲೆ (೧೯೩೮), ನಾದಲೀಲೆ (೧೯೩೮) ಕವನ ಸಂಕಲನಗಳು ಹಾಗೂ ಕಾಳಿದಾಸನ ಮೇಘದೂತಮ್‌ನ ಅನುವಾದ 'ಕನ್ನಡ ಮೇಘದೂತ' (೧೯೩೮) ರಚಿಸಿದರು. ಆ ಅವಧಿಯ ಕಾವ್ಯವೆಲ್ಲವೂ ಅತಿಸ್ವಾಭಾವಿಕವಾಗಿ ಕವಿ ಜೀವನದಿಂದ ಹಸಿಹಸಿಯಾಗಿ ಹೊಮ್ಮಿ ಬಂದ ಚಿಗುರಿನಂತಿವೆ.

ಬೇಂದ್ರೆಯವರ ಎಂ.ಎ. ವಿದ್ಯಾಭ್ಯಾಸಕ್ಕೆ ತಕ್ಕ ಉದ್ಯೋಗವನ್ನು ಪುಣೆ ಕಾಮರ್ಸ್ ಕಾಲೇಜಿನವರು ೧೯೪೨ರಲ್ಲಿ ನೀಡಿದರು. ಅವರು ಅಲ್ಲಿ ಅರೆಕಾಲಿಕ ಕನ್ನಡ ಪ್ರಾಧ್ಯಾಪಕರಾಗಿ ಕೆಲಸಮಾಡಿದರು. ಅದೇ ವರ್ಷ ಶ್ರೀ ಅರವಿಂದ ಮತ್ತು ಶ್ರೀ ಮಾತೆಯವರ ದರ್ಶನ ಪಡೆದರು. ೧೯೪೩ರಲ್ಲಿ ಶಿವಮೊಗ್ಗದಲ್ಲಿ ನಡೆದ ೨೩ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. ಅವರು ೧೯೪೪ ರಿಂದ ೧೯೫೬ ರವರೆಗೆ ಸೊಲ್ಲಾಪುರದ ಡಿ.ಎ.ವಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ದುಡಿದರು. ಅವರಿಗೆ ೧೯೫೯ರಲ್ಲಿ 'ಅರಳು ಮರಳು' ಕವನ ಸಂಗ್ರಹಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೧೯೭೪ರಲ್ಲಿ 'ನಾಕುತಂತಿ' ಕವನ ಸಂಗ್ರಹಕ್ಕೆ ಜ್ಞಾನಪೀಠ ಪ್ರಶಸ್ತಿ ದೊರಕಿತು. ಅವರು ತುಂಬು ಬಾಳನ್ನು ಸವಿದು ೨೬-೧೦-೧೯೮೧ ದೀಪಾವಳಿ- ನರಕಚತುರ್ದಶಿ ದಿನ ಮಧ್ಯಾಹ್ನ ೧-೧೮ಕ್ಕೆ ನಿರ್ವಾಣಹೊಂದಿ ಬೆಳಕಲ್ಲಿ ಬೆಳಕಾಗಿ ಹೋದರು. ಆ ಜ್ಯೋತಿ ಕನ್ನಡ ಸಾಹಿತ್ಯಕ್ಕೆ ನೀಡಿದ ಬೆಳಕು ಕನ್ನಡಿಗರ ನುಡಿಯಲ್ಲಿ ಹೊಳಪಾಗಿ ಸದಾ ಹೊಳೆಯುತ್ತಿದೆ.

## (ಏ) ಬೇಂದ್ರೆ ಕಾವ್ಯ ವಿಮರ್ಶೆ

೧೯೩೩ರಲ್ಲಿ ಗರಿ ಕವನ ಸಂಕಲನವನ್ನು ವಿಮರ್ಶಿಸಿದ ತೀನಂಶ್ರೀ ಅವರು "ಇವರ ಕೃತಿಗಳಲ್ಲಿ ಪದಪದವೂ ಅರ್ಥದ ಭಾರದಿಂದ ಬಾಗಿರುತ್ತದೆ. ಅದರ ಹೊರ ಮೈಯ ಸಿರಿಗಿಂತ ಒಳಗಡೆಯ ಆಳವೆ ಹೆಚ್ಚು. ಧ್ವನಿಪೂರ್ಣತೆಯೂ ಅದರಿಂದ ಒದಗುವ ಬಿಗಿಕಟ್ಟೂ ಈತನ ಶೈಲಿಯ ವಿಶೇಷ ಲಕ್ಷಣ. ಪದ್ಯವು ಸಾಗುತ್ತಿರುವಾಗ, ಅಲ್ಲಲ್ಲೇ ಭಾವಗಳು ಬಿಗಿಯಾದ ಮಾತಿನಲ್ಲಿ ಎದ್ದು ನಿಲ್ಲುತ್ತವೆ. ಉಕ್ತಿಮುಕ್ತಾ ಫಲವಾಗಿ ಬಿರಿಯುತ್ತದೆ."[೧೮] ಎಂದು ತಿಳಿಸಿದ್ದಾರೆ. ಅಂದಿನಿಂದ ಇಂದಿನವರೆಗೆ ಕನ್ನಡದ ಚಿಂತನಶೀಲ ವಿಮರ್ಶಕರು ಬೇಂದ್ರೆ ಕಾವ್ಯಾಧ್ಯಯನ ನಡೆಸಿ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹೀಗೆ ಸದಾ ಕುತೂಹಲದ ನಿಧಿಯಾಗಿ, ನಿಗೂಢದ ಖನಿಯಾಗಿ ಕನ್ನಡ ಮನಸ್ಸನ್ನು ಸೆಳೆದ ಕವಿ ಬೇಂದ್ರೆ.

### ಗಾರುಡಿಗ

೧೯೩೮ರಲ್ಲಿ 'ನಾದಲೀಲೆ' ಕವನ ಸಂಕಲನಕ್ಕೆ ಮಾಸ್ತಿಯವರು 'ಮುನ್ನುಡಿ' ಯನ್ನು ಬರೆದಿದ್ದಾರೆ. ಅವರು ಅದರಲ್ಲಿ ತಾವು ಬೇಂದ್ರೆ ಕಾವ್ಯಕ್ಕೆ ಮನಸೋತಿದ್ದನ್ನು, ಬೇಂದ್ರೆ ಕಾವ್ಯಲಕ್ಷಣಗಳನ್ನು ವಿವರ ವಿವರವಾಗಿ ತಿಳಿಸಿದ್ದಾರೆ. "ಬೇಂದ್ರೆಯವರಿಗೆ ಅನುಭವದ ತೀವ್ರತೆಗೆ ಸಮನಾಗಿ ನಿಶಿತವಾದ ವಿಚಾರ ಶಕ್ತಿಯಿದೆ. ಇವರು ತಮ್ಮ ಅನುಭವವನ್ನೂ ಇತರರ ಅನುಭವವನ್ನೂ ಎಳೆ ಎಳೆಯಾಗಿ ಬಿಡಿಸಬಲ್ಲರು, ತೋರಿಸಬಲ್ಲರು; ನಿಶಿತವಾಗಿರುವ ಈ ವಿಚಾರದ ಕ್ಷೇತ್ರವೂ ವಿಸ್ತಾರವಾಗಿದೆ. ಎಷ್ಟು ಅನುಭವಗಳೋ ಅಷ್ಟು ವಿಚಾರಗಳೂ ಆಗಿರುವುದರಿಂದ ಇವರ ಕೃತಿಗಳಲ್ಲಿ ರಾಗದ ಭಾಗದ ಬದಿಗೆ ಬುದ್ಧಿಯ ಭಾಗ ಸಮಸಮವಾಗಿ ನಡೆಯುತ್ತದೆ. ಎಲ್ಲಿಯೇ ಆಗಲಿ ಕವಿತ್ತ್ವವನ್ನು ಬಿಟ್ಟು ಮಾತನಾಡಿದನೋ ಎಂದು ಶಂಕೆ ಬರುವುದಿಲ್ಲ.

ತಮ್ಮ ಕಾವ್ಯದ ಈ ಸಂಪತ್ತಿನಿಂದ ಕವಿ ತಮ್ಮ ಜನದ ಮನಸ್ಸನ್ನೂ ಸೂರೆಮಾಡಿದ್ದಾರೆ. ಇವರು ಪದ್ಯಗಳನ್ನೋದುವಾಗ ಕೇಳುತ್ತ, ನಾನು ಅವುಗಳ ಸೊಗಸಿಗೆ ಮರುಳಾಗಿದ್ದೇನೆ. ಮರುಳು ಎಂದರೆ ಜನರು ಸರಿಯಾಗಿ ಅರ್ಥ ಮಾಡಿಕೊಳ್ಳುವರೋ ಇಲ್ಲವೋ ನನಗೆ ಸಂದೇಹ. ಆದರೆ ಆ ಸಂದರ್ಭದಲ್ಲಿ ನನ್ನಂತೆ ಅನೇಕರಿಗೆ ಒದಗುವಸ್ಥಿತಿ ಆನಂದದಿಂದ ಉಂಟಾಗುವ ಮರುಳು ಎಂದೇ ಹೇಳಬೇಕು. ಬೇಂದ್ರೆಯವರು ಬೆಳಗಾವಿಯಲ್ಲಿ 'ಹಕ್ಕಿ ಹಾರುತಿದೆ ನೋಡಿದಿರಾ' ಎಂಬ ಪದ್ಯವನ್ನು ಓದುವಾಗ

---

೧೮. ತೀ.ನಂ.ಶ್ರೀಕಂಠಯ್ಯ, ಸಮಾಲೋಕನ, ಶೃಂಗಾರ ಪ್ರಕಾಶನ, ಚಿಕ್ಕನಾಯಕನಹಳ್ಳಿ, ೧೯೯೯, ಪು. ೫೩.

ತಲೆಗೆ ಹಿಂದುಸ್ಥಾನದ ಪಗಡಿಯೊಂದನ್ನು ಸುತ್ತಿನಿಂತಿದ್ದರು. ಇವರ ಆಗಿನ ನಿಲುವು, ನನ್ನ ಕಣ್ಣಿಗೆ ಗಾರುಡಿಗನೊಬ್ಬನ ನಿಲುವಿನಂತೆ ಕಂಡಿತು. ಈಗಲೂ ನನಗೆ ಬೇಂದ್ರೆಯವರ ಸಹಜವಾದ ನಿಲುವು ಆ ಗಾರುಡಿಗನ ನಿಲುವೆಂದು ಕಾಣುತ್ತದೆ. ಅವರನ್ನು ಕುರಿತು ನಾನು ಬರೆದ ಅಷ್ಟ ಷಟ್ಪದಿಯಲ್ಲಿ ಈ ಅಭಿಪ್ರಾಯಕ್ಕೆ ರೂಪುಕೊಟ್ಟೆನು. ಮರುಳು ಮಾಡು, ಗಾರುಡಿಗ ಎಂಬ ಮಾತುಗಳಲ್ಲಿ ಈಗ ನಮಗೆ ಅಲ್ಪ ಕಲ್ಪನೆಗಳು ಕಾಣುತ್ತವೆ. ಅವುಗಳ ಮೂಲ ಅರ್ಥದಲ್ಲಿ ಶಕ್ತಿ, ಶಾಂತಿ, ಓಜಸ್ಸು ಮಾತ್ರ ಸೂಚಿತವಾಗುತ್ತದೆ. ಅಷ್ಟನ್ನು ಮಾತ್ರ ನಾನು ಇಲ್ಲಿ ಉದ್ದೇಶಿಸಿದ್ದೇನೆ. ಬೇಂದ್ರೆಯವರ ಕವಿತೆಯ ವಿಶೇಷ ಲಕ್ಷಣ ಈ ಶಕ್ತಿ, ಈ ಶಾಂತಿ, ಈ ಓಜಸ್ಸು ಇವರ ಕವಿತೆಯನ್ನು ಅರಿಯುವ ಜನರಿಗೆ ಇವಕ್ಕೆ ಮನ ತಗ್ಗಿಸದೆ ನಿಲುಗಡೆ ಇಲ್ಲ." [೧೯]

## ಭಾಷೆಯ ಜೀವನಾಡಿಯನ್ನೇ ಮಿಡಿದ ಕವಿ

ಗೋಪಾಲಕೃಷ್ಣ ಅಡಿಗರ ವಿಮರ್ಶಾನುಡಿ : 'ಕನ್ನಡದ ಕವಿಗಳಲ್ಲಿ ಪಂಪ ನಾರಣಪ್ಪರ ತರುವಾಯ ಕನ್ನಡದ ಜೀವಾಳವನ್ನೇ ಹಿಡಿದು ಈ ನಮ್ಮ ಭಾಷೆಯ ಜೀವನಾಡಿಯನ್ನೇ ಮಿಡಿದು ಕಾವ್ಯರಚನೆ ಮಾಡಿದ ಕವಿ ನಮ್ಮಲ್ಲಿ ಬೇಂದ್ರೆಯವರಲ್ಲದೆ ಬೇರೆ ಯಾರೂ ಇಲ್ಲ.

ತನ್ನ ವೈಯಕ್ತಿಕ ಜೀವನದ ನೋವು ನಲಿವುಗಳನ್ನು ಪ್ರೀತಿ ವಿರಹಗಳನ್ನೂ ಕುರಿತು ಈ ಕವಿಯಷ್ಟು ಭಾವಪೂರ್ಣ ಹೃದಯಸ್ಪರ್ಶ ಗೀತೆಗಳನ್ನು ರಚಿಸಿದವರು ಆಧುನಿಕ ಕನ್ನಡದಲ್ಲಿ ಬೇರೆ ಯಾರೂ ಇಲ್ಲ. ಇವರ ಕಾವ್ಯಸಿದ್ಧಿ ಎಷ್ಟು ದೊಡ್ಡದೆಂದರೆ ಅವರ ಕಾವ್ಯ ಕನ್ನಡ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗವಾಗಿ ನಮ್ಮ ಬದುಕಿನಲ್ಲಿ ಬೆರೆತು ಹೋಗಿದೆ. ಕನ್ನಡ ಜನ ಇಂಥ ದೊಡ್ಡ ಕವಿಗೆ ಕೃತಜ್ಞರು. ಇಂಥ ಕವಿಯನ್ನು ಅವಹೇಳನ ಮಾಡಬಲ್ಲವನಿದ್ದರೆ ಅಂಥವನು ನಮ್ಮೆಲ್ಲರ ಕನಿಕರಕ್ಕೂ ಪಾತ್ರ–ಅಷ್ಟೆ".[೨೦]

## ಏನನ್ನು ಹುಡುಕಹೋದೆವು?

ಶಂಕರಮೊಕಾಶಿ ಪುಣೇಕರ ಅವರ ವಿಮರ್ಶಾನುಡಿ: "ಬೇಂದ್ರೆಯವರ ಇತ್ತೀಚಿನ ಕವನಗಳಲ್ಲಿ ಅವರ ಮೊದಲಿನ ಕವಿತೆಯಲ್ಲಿರುವ ಎಲ್ಲ ಗುಣಗಳನ್ನು ಹುಡುಕಿ, ಕೆಲವನ್ನು ಕಾಣದೆ ಅವರು ವೃದ್ಧರಾದರೆಂದೂ ಕಾವ್ಯದ ಮೇಲಿನ ಅವರ ಹಿಡಿತ ಸಡಿಲಾಯಿತೆಂದೂ ಹೇಳುವ ಮೊದಲು, ನಾವು ಏನನ್ನು ಹುಡುಕ ಹೋದೆವೆಂಬುದನ್ನು ಆಲೋಚಿಸುವದು ವಿವೇಕದ ಲಕ್ಷಣ.

---

೧೯. ಶ್ರೀನಿವಾಸ, 'ಮುನ್ನುಡಿ' ದ.ರಾ.ಬೇಂದ್ರೆ, ನಾದಲೀಲೆ, ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೪೯, ಪು. ೨೦, ೨೧

೨೦. ಗೋಪಾಲಕೃಷ್ಣ ಅಡಿಗ, ಬೇಂದ್ರೆಯವರ ಕಾವ್ಯ, ಕನ್ನಡಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು. ೧೯೯೧, ಪು. ೧೧

ಬೇಂದ್ರೆಯವರ ಸುದೈವವೆಂದರೆ (ಅದು ಕನ್ನಡದ ಸುದೈವವವೂ ಹೌದು) ಅವರು ತಮ್ಮ ಇತ್ತೀಚೆಗಿನ ಕಾವ್ಯದಲ್ಲಿ ಅರವಿಂದ ತತ್ವಜ್ಞಾನದ ಮುಖಾಂತರ ವ್ಯಕ್ತಿ ಸಾಮಾನ್ಯತೆಯ ಅನುಭವದತ್ತ ಹಬ್ಬುಗೆ ಗೊಂಡಿದ್ದಾರೆ. ಕದಾಚಿತ್ ಅವರು ಫ್ರಾಯಿಡನ, ಯುಂಗನ, ಮಾರ್ಕ್ಸ್‌ನ ಮುಖಾಂತರ ಈ ದರ್ಶನದತ್ತ ಹೊರಳಿದ್ದರೆ ಇಷ್ಟೊಂದು ಸೌಮ್ಯವಾದ, ಆಳವಾದ, ಸಹಿಷ್ಣುವಾದ, ಏತದ್ದೇಶೀಯವಾದ ಕಾವ್ಯವನ್ನು ಬರೆಯುವದು ಶಕ್ಯವಾಗುತ್ತಿರಲಿಲ್ಲವೆಂಬುದು ಸ್ಪಷ್ಟ. ಪ್ರಾಯಿಡನ ಮುಖಾಂತರ ಹೀಗೆ ಹಬ್ಬಲು ಹೋದ ಅಡೆನ್‌ನಂಥವರು, ಮಾರ್ಕ್ಸ್‌ನ ಮುಖಾಂತರ ಹಬ್ಬಲು ಹೋದ ಸಿ.ಡೇ. ಲ್ಯೂಯಿಸನಂತವರು ಇಂಗ್ಲೀಷದಲ್ಲಿಯೇ ಪೂರ್ಣಯಶಸ್ವಿಯಾಗದೇ ಬೇರೆ ಕಾವ್ಯ ರೀತಿಗಳತ್ತ ಹೊರಳಿದರು. ಅರವಿಂದ ತತ್ತ್ವಜ್ಞಾನವು ಬುದ್ಧಿ-ಭಾವಗಳೆರಡನ್ನೂ ಒಳಗೊಂಡಿದ್ದಲ್ಲದೆ ಕವಿಗೆ ಬೇಕಾಗುವ World-View, a sense of destiny ಇವುಗಳನ್ನು ಆಧುನಿಕ ಪ್ರಜ್ಞೆಯ ಅರಿವಿನಲ್ಲಿಯೇ ಹುಟ್ಟಿಸುತ್ತದೆ."[೨೧]

"ಒಂದು ಪೂರ್ಣ ಆಯುಷ್ಯವನ್ನು ಸಫಲವಾಗಿ ಯಾರ ಕಾವ್ಯದ ಅಭ್ಯಾಸಕ್ಕಾಗಿ ಮೀಸಲಿಡಬಹುದೋ ಅಂಥ ಕನ್ನಡ ಕವಿಗಳಲ್ಲಿ ಶ್ರೀಮಾನ್ ಬೇಂದ್ರೆಯವರು ಅತ್ಯಾಧುನಿಕರು."[೨೨]

## ಬೇಂದ್ರೆ ಕಾವ್ಯ ಸಂವಾದ

ಬೇಂದ್ರೆ ಕಾವ್ಯವಿಮರ್ಶೆಯ ಪ್ರಮುಖರಾದ ಕೀರ್ತಿನಾಥ ಕುರ್ತಕೋಟಿ ಹಾಗೂ ಕನ್ನಡ ಸಂಸ್ಕೃತಿ ವಿಮರ್ಶಕರಾದ ಡಿ.ಆರ್. ನಾಗರಾಜ್ ಅವರು ಬೇಂದ್ರೆ ಕಾವ್ಯ ಕುರಿತು ಆಲೋಚಿಸಿರುವ ರೀತಿ ಅಧ್ಯಯನಶೀಲವಾಗಿದೆ. ಬೇಂದ್ರೆಯವರ ಕಾವ್ಯ ಎಷ್ಟರಮಟ್ಟಿಗೆ ಬೌದ್ಧಿಕವ್ಯವಸ್ಥೆಗಳನ್ನು ಅವಲಂಬಿಸಿದೆ ಎಂಬುದನ್ನು ಡಿ.ಆರ್. ನಾಗರಾಜ್ ಅವರು 'ಶಕ್ತಿ ಶಾರದೆಯಮೇಳ' ಕೃತಿಯಲ್ಲಿ ವಿವರಿಸಿದ್ದಾರೆ. ಮೊದಲು ಕೀರ್ತಿನಾಥ ಕುರ್ತಕೋಟಿಯವರ ವಿಮರ್ಶೆಯನ್ನು ದಾಖಲಿಸಿ ಅನಂತರ ತಮ್ಮ ವಾದದ ಸಮರ್ಥನೆ ಮಂಡಿಸಿದ್ದಾರೆ.

"ಮತ್ತೊಂದು ಮುಖ್ಯ ವಿಚಾರವನ್ನು ಚರ್ಚಿಸಬೇಕಾದ ಅಗತ್ಯವಿದೆ. ಅದು ಬೇಂದ್ರೆಯವರ ಕಾವ್ಯ ಎಷ್ಟರ ಮಟ್ಟಿಗೆ ಬೌದ್ಧಿಕವ್ಯವಸ್ಥೆಗಳನ್ನು ಅವಲಂಬಿಸಿದೆ ಎಂಬುದು

---

೨೧. ಶಂಕರಮೊಕಾಶಿ ಪುಣೇಕರ, 'ಓತಾಯಿ ಮಾಯಿ', ಬುದ್ಧಣ್ಣ ಹಿಂಗಮಿರೆ (ಸಂ), ಇಳಿದುಬಾತಾಯಿ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೭,ಪು. ೪೫೫, ೪೬೭

೨೨. ಶಂಕರಮೊಕಾಶಿ ಪುಣೇಕರ, ಶ್ರೀಬೇಂದ್ರೆಯವರ ಕಾವ್ಯಮೀಮಾಂಸೆ, ಸಮಾಜ ಪುಸ್ತಕಾಲಯ, ಧಾರವಾಡ, ೧೯೬೨, ಪು. ೬೫

ಈ ಪ್ರಶ್ನೆಯನ್ನು ಕೀರ್ತಿನಾಥ ಕುರ್ತಕೋಟಿಯವರು ತಮ್ಮ 'ಭೃಂಗದ ಬೆನ್ನೇರಿ' ಕೃತಿಯಲ್ಲಿ ಉತ್ತರಿಸುತ್ತಾರೆ. ಬೇಂದ್ರೆಯವರ ಕಾವ್ಯದ ಅನೇಕ ಅಂಶಗಳ ಮಟ್ಟಿಗೆ ಅತ್ಯಂತ ಮಹತ್ವದ ಒಳನೋಟ, ಅರ್ಥೈಸುವಿಕೆಯ ಕ್ರಮಗಳನ್ನು ಕನ್ನಡ ವಿಮರ್ಶಾ ಲೋಕಕ್ಕೆ ತಂದ ಈ ಕೃತಿಯಲ್ಲಿ ಪ್ರಸ್ತುತ ಸಮಸ್ಯೆಯ ಮಟ್ಟಿಗೆ ಕುರ್ತಕೋಟಿಯವರ ನಿಲುವು ಬೇಂದ್ರೆಯವರ ಕಾವ್ಯದ ಮೂಲಬೇರುಗಳನ್ನು ಹಿಡಿಯಲು ಅಷ್ಟು ಸಹಾಯಕವಾಗಿಲ್ಲ. ಕುರ್ತಕೋಟಿ ಹೇಳುತ್ತಾರೆ:

ಕವಿಯಾದವನು ಒಂದು ಮತಕ್ಕೊ ಒಂದು ಪಂಥಕ್ಕೊ ಸಂಬಂಧಿಸಿದ್ದವನಾಗಿದ್ದರೆ, ಅಥವಾ ಒಂದು ವಿಚಾರ ಪ್ರಣಾಲಿಯನ್ನು ನಂಬುತ್ತಿದ್ದರೆ ಅವನ ಕಾವ್ಯಕ್ಕೆ ಆಯಾ ಮತ-ಪಂಥಗಳ ಆಯಾ ವಿಚಾರ ಪ್ರಣಾಲಿಯ ಬಣ್ಣಬರುವುದು ಸ್ವಾಭಾವಿಕವಾಗುತ್ತದೆ. ಕವಿ ಪ್ರತಿಭಾವಂತನಾಗಿದ್ದರೆ ತನ್ನ ಧರ್ಮಕ್ಕೂ ಕಾವ್ಯ ಧರ್ಮಕ್ಕೂ ಇರಬಹುದಾದ ಸಂಘರ್ಷವನ್ನು ಸುಲಭವಾಗಿ ಪರಿಹರಿಸಿಕೊಂಡು ಮುಂದೆ ಹೋಗಬಲ್ಲ. ಆದರೆ ಬೇಂದ್ರೆಯವರ ಕಾವ್ಯದ ವಿಷಯ ಬೇರೆ. ಅವರಿಗೆ ಸ್ವಂತವೆನ್ನಬಹುದಾದ, ವೈಯಕ್ತಿಕ ವೆನ್ನಬಹುದಾದ ಮತ್ತು ಕಾವ್ಯೇತರವಾದ ಯಾವ ವಿಚಾರ ಪ್ರಣಾಲಿಯೂ ಇಲ್ಲ. ಮಹರ್ಷಿ ಅರವಿಂದ ತಾತ್ವಿಕತೆಯಿಂದ ಅವರು ಪ್ರಭಾವಿತರಾಗಿರುವುದು ಗೊತ್ತಿದ್ದೂ ಈ ಮಾತನ್ನು ಹೇಳಬೇಕಾಗಿದೆ. ಅರವಿಂದರಂತೆ ಬೇರೆ ಕೆಲವು ಅನುಭಾವೀ ಕವಿಗಳು ಅವರ ಮೇಲೆ ಪ್ರಭಾವ ಬೀರಿದ್ದಾರೆ. ಆದರೆ ಈ ಪ್ರಭಾವವೆಲ್ಲ ಅವರ ವ್ಯಕ್ತಿಜೀವನದ ಅಂತರ್ಮುಖತೆಯನ್ನು ಹೆಚ್ಚು ಶ್ರೀಮಂತವಾಗಿಸುವುದಕ್ಕೆ ಮಾತ್ರ.

ಈ ವಿಚಾರದಲ್ಲಿ ಅನೇಕ ಅಸಮಂಜಸ ಹೇಳಿಕೆಗಳಿವೆ. ಧರ್ಮಕ್ಕೂ (ಬೌದ್ಧಿಕ ವ್ಯವಸ್ಥೆ) ಮತ್ತು ಕಾವ್ಯಧರ್ಮಕ್ಕೂ (ಅನುಭವದ ಒತ್ತಾಯ) ನಡುವಿನ ಸಂಘರ್ಷ ಸರಳವಾಗಿ ಪರಿಹಾರವಾಗಿ ಬಿಟ್ಟಾಗ, ಆತ ಕವಿಯಾಗಿ ಉಳಿದಿರುವುದೇ ಇಲ್ಲ. ಬದಲಾಗಿ ಆತ ಬೌದ್ಧಿಕ ವ್ಯವಸ್ಥೆಯ ಒಂದು ಪ್ರಚಾರಾಂಗವಾಗಿ ಮಾತ್ರ ಉಳಿದಿರುತ್ತಾನೆ. ಈ ಮಾತು ಹಾಗಿರಲಿ, ಇದಕ್ಕಿಂತ ಮುಖ್ಯವಾದ ಅಸಮಂಜಸ ಹೇಳಿಕೆ ಎಂದರೆ ಬೇಂದ್ರೆಯವರಿಗೆ ಕಾವ್ಯೇತರವಾದ ಯಾವ ವಿಚಾರ ಪ್ರಣಾಲಿಯೂ ಇಲ್ಲ ಎಂದಿರುವುದು ಅತ್ಯಂತ ಆಳದಲ್ಲಿ ಹೊಂದಿಕೆಯಾಗುವ ಸೂಕ್ಷ್ಮ ವ್ಯತ್ಯಾಸಗಳಿರುವ, ಕೆಲವೊಮ್ಮೆ ತಮ್ಮ ಅಂತಿಮ ಪರಿಣಾಮದಲ್ಲಿ ವಿರುದ್ಧ ನಿಲುವುಗಳಿಗೆ ಕೂಡಾ ತಳ್ಳಬಲ್ಲ ವಿವಿಧ ಬೌದ್ಧಿಕವ್ಯವಸ್ಥೆಗಳು ಬೇಂದ್ರೆಯವರನ್ನು ಪ್ರಭಾವಗೊಳಿಸಿವೆ ಎಂಬ ವಿಚಾರ ಕನ್ನಡ ವಿಮರ್ಶೆಯಲ್ಲಿ ಈಗಾಗಲೇ ಒಪ್ಪಿತವಾಗಿದೆ. ಉಪನಿಷತ್ತುಗಳು, ಸಾಂಖ್ಯ, ಅನುಭಾವ, ಅರವಿಂದ ವಿಚಾರಧಾರೆ- ಈ ಎಲ್ಲಾ ಮುಖ್ಯ ಪ್ರಭಾವಗಳೂ ಕೂಡಾ ಅತ್ಯಂತ

ಸೂಕ್ಷ್ಮ ಹಂತಗಳಲ್ಲಿ ಬೇರೆಯೇ ಆದವುಗಳು ಎಂಬುದನ್ನು ತೌಲನಿಕ ತತ್ವಜ್ಞಾನ ಹಾಗೂ ತೌಲನಿಕ ಧರ್ಮ ಮೀಮಾಂಸೆಗಳ ವಿದ್ಯಾರ್ಥಿಗಳಿಗೆ ವಿವರಿಸಬೇಕಿಲ್ಲ. ವಾಸ್ತವವಾಗಿ ಅತ್ಯಂತ ಖಚಿತ ಹಾಗೂ ವ್ಯಾಪಕ ಚೌಕಟ್ಟೊಳಗೆ ಇವುಗಳನ್ನು ವ್ಯವಸ್ಥೆಗೊಳಿಸದೆ ಹೋದರೆ ಪ್ರಜ್ಞೆಯೊಂದನ್ನು ಇವು ಕತ್ತರಿಸಿ ಬಿಡುತ್ತವೆ. ಇವೆಲ್ಲವನ್ನೂ ಒಂದೇ ಪಾತ್ರೆಯೊಳಗೆ ಹಾಕಿಕೊಂಡಿರುವಷ್ಟು ಭೋಳೆತನ ಬೇಂದ್ರೆ ಪ್ರಜ್ಞೆಗಿಲ್ಲ ಎಂಬುದಕ್ಕೆ ಅವರ ಕಾವ್ಯವೇಸಾಕ್ಷಿ. ಹೀಗಿದ್ದಾಗ, ಈ ಎಲ್ಲ ವಿವಿಧ ಬೌದ್ಧಿಕ ವ್ಯವಸ್ಥೆಗಳನ್ನು ಬೇಂದ್ರೆ ವ್ಯವಸ್ಥೀಕರಿಸಿಕೊಂಡ ಕ್ರಮನಿಜಕ್ಕೂ ಕುತೂಹಲಕಾರಿಯಾದದ್ದು"[೨೩]

***

೨೩. ಡಿ.ಆರ್. ನಾಗರಾಜ್, ಶಕ್ತಿ ಶಾರದೆಯಮೇಳ, ಅಕ್ಷರಪ್ರಕಾಶನ, ೧೯೮೭, ಪು.೩೪, ೩೫

# ೫. ಪ್ರಕೃತಿ ಗೀತೆಗಳು

ಬೇಂದ್ರೆಯವರ ಪ್ರಕೃತಿ ಗೀತೆಗಳಲ್ಲಿ ಮೂಕನಿಸರ್ಗವೇ ತನ್ನ ಮೌನಮುರಿದಂತೆ ಕನ್ನಡದ ನುಡಿಯಾಗಿ ಹರಿದಿದೆ. ಪಂಚಭೂತಗಳಿಂದಾದ ನಿಸರ್ಗ ಕವಿಯನ್ನು ಪೋಷಿಸಿ ಅವರ ಪಂಚೇಂದ್ರಿಯಗಳನ್ನು ಜಾಗೃತಗೊಳಿಸಿ ಆನಂದಮಯವಾಗಿಸಿದೆ. ಅವನಿಗೆ ಆದ ಆಹ್ಲಾದ ಕಾವ್ಯೋದ್ಗಾರವಾಗಿದೆ. ಅವನು ತಾನೇ ಪ್ರಕೃತಿಯಾಗಿ ಅದರೊಂದಿಗೆ ನಲಿದ ವೈಶಿಷ್ಟ್ಯವಿದೆ. ಅವು ತನ್ನಂತೆ ಪಂಚಭೌತಿಕ ಶರೀರ ಹೊಂದಿವೆ ಎಂದು ತಬ್ಬಿನಲಿದ ಆನಂದವಿದೆ. ಪ್ರಕೃತಿಯ ಅನುಭವ ಅವರಿಗೆ ವ್ಯಕ್ತಿಗತ ಸಂಬಂಧವಾಗಿ ಅದು, 'ಚಳಿಯಾಕೆ', 'ಚಂದುಮಾಮ', 'ಮತ್ತೆ ಶ್ರಾವಣಾಬಂದ', 'ಬಂದಿಕಾರ ಶ್ರಾವಣ', 'ನೀರೆ' ಯಾಗಿದೆ. ಅವರಿಗೆ 'ಇಳೆ' ಎಂದರೆ 'ಬರಿಮಣ್ಣಲ್ಲ', ಅದು 'ಭೂಮಿತಾಯಿ', 'ಮೊದಲಗಿತ್ತಿ'.

'ನಾದಲೀಲೆ' ಕವನಸಂಕಲನಕ್ಕೆ 'ಮುನ್ನುಡಿ' ಬರೆಯುತ್ತಾ ಮಾಸ್ತಿಯವರು 'ಬೆಳಗು' ಕವನವನ್ನು ಕುರಿತು ಬರೆದ ವಿಮರ್ಶಾನುಡಿ ಬೇಂದ್ರೆಯವರ ನಿಸರ್ಗಕಾವ್ಯ ಭಾಷ್ಯವಾಗಿದೆ. "ನಾನು ಬೇಂದ್ರೆಯವರ ಕೃತಿ ಒಂದಕ್ಕೆ ಮನಸೋತದ್ದು, ಈಗ್ಗೆ ಬಹುವರ್ಷದ ಹಿಂದಿನ ಮಾತು. ಆಗ್ಗೆ ನಾನು ಇವರನ್ನು ನೋಡಿರಲಿಲ್ಲ. ಧಾರವಾಡ 'ಸ್ವಧರ್ಮ' ಪತ್ರಿಕೆಯಲ್ಲಿ ಪ್ರಕಟವಾದ ಆ ಪದ್ಯ 'ಮೂಡಲ ಮನೆಯಾ ಮುತ್ತಿನ ನೀರಿನ ಎರಕವ ಹೊಯ್ದಾ' ಎಂದು ಆರಂಭವಾಗಿ ಒಂದು ಉದಯವನ್ನು ವರ್ಣಿಸಿತ್ತು. ಅದರಲ್ಲಿ ಕಂಡ ಊಹೆ ವಿಲಕ್ಷಣವಾಗಿತ್ತು. ಎಷ್ಟೋ ಕವಿಗಳು ಈ ಮೊದಲೇ ಮಾಡಿರುವ ವರ್ಣನೆಯಲ್ಲಿ ಈ ಕವಿ ಒಂದು ಹೊಸ ಚೆಲುವನ್ನು ತಂದಿದ್ದನು. ಕೊನೆಗೆ ಇದ್ದ ಮುದ್ರಿಕೆಯಿಂದ ಕವಿಯ ಪರಿಚಯ ವ್ಯಕ್ತವಾಗಿರಲಿಲ್ಲ. ಆದರೆ ಈ ಕವಿಯ ದೃಷ್ಟಿಯೇ ಬೇರೆಯೆನ್ನುವುದು ಈ ಪದ್ಯದಲ್ಲಿ ಕಾಣುತ್ತಿತ್ತು. ಉದಯದಲ್ಲಿ ಹಕ್ಕಿಗಳು ಹಾಡುವುದನ್ನು 'ಗಿಡಗಂಟೆಯ ಕೊರಳಿನಿಂದ ಸ್ವರಹೊರಟಿದೆ' ಎಂದು ಇವರು ವರ್ಣಿಸಿದ್ದರು. ಹಾಡುವ ಹಕ್ಕಿ ಗಿಡಗಂಟೆಯ ಕೊರಳು. ಉದಯದಲ್ಲಿ ಗಿಡ ಪಡುವ ಆನಂದವನ್ನು ಹಕ್ಕಿಯ ಹಾಡು ಹೊರಸೂಸುತ್ತದೆ. ಇಂಥ ಮಾತಿನಲ್ಲಿ ಮಿಗಿಲಾದ ಚಾತುರ್ಯ ಮಾತ್ರವಲ್ಲ. ಪ್ರಕೃತಿಯನ್ನು ಕುರಿತು ವಿಲಕ್ಷಣ ಭಾವನೆಯಿದೆ.

ವರ್ಣನೆಯ ಚಾತುರ್ಯವೆಂದು ಕಾಣುವ ಈ ಉಕ್ತಿಭಂಗಿ ಭಾವನೆಯ ಫಲ. ಈ ಭಾವನೆಯೇ ಬೇಂದ್ರೆಯವರ ಎಲ್ಲ ಕವಿತೆಯ ಬಲದಬೇರು."[೧]

## ಶ್ರಾವಣಕವಿ

ನಿಸರ್ಗಕವಿಗಳು ಸಾಧಾರಣವಾಗಿ ವಸಂತಋತುವಿನ ಆರಾಧಕರಾದರೆ ಬೇಂದ್ರೆಯವರು ವರ್ಷಋತುವಿನ ಆರಾಧಕರಾಗಿದ್ದಾರೆ. ಅವರು ಶ್ರಾವಣವನ್ನು ಕುರಿತು ಹಲವಾರು ಕವನಗಳನ್ನು ರಚಿಸಿದ್ದಾರೆ. ಶ್ರಾವಣ ಅವರ ಜೀವ ಚೈತನ್ಯದ ಭಾಗವಾಗಿದೆ. 'ನನ್ನ ಕಣ್ಣೇಕಿವಿಯು ಕವಿಯು ನಾನು' ಎಂದು ಹಾಡಿದ ಬೇಂದ್ರೆಯವರಿಗೆ 'ಕಿವಿಯೆಕವಿ'. ಶ್ರಾವಣ ಕುತೂಹಲದ, ಜೀವದಾಧಾರ ಮಳೆಯನ್ನು ಹೊತ್ತು ತರುವ ಸುಂದರ ಪ್ರಕೃತಿಯ ಮಾಸ. ಅದು ಚೆಲುವು ಒಲವು, ನೆರೆ ಅಬ್ಬರಗಳಿಂದ ಬೇಂದ್ರೆಯವರ ಸೃಜನಶೀಲತೆ ಮತ್ತು ಜಿಜ್ಞಾಸೆ ರೂಪುಗೊಂಡು ವಿಕಾಸಗೊಳ್ಳಲು ಕಾರಣವಾದ ಮಾಸ. ಅವರು ಶ್ರಾವಣದ ನಾದಮಾಧುರ್ಯಕ್ಕೆ ಶ್ರುತಿಗೊಂಡ ಕಿವಿಯನ್ನು ಕವಿಯಾಗಿಸಿದ 'ಶ್ರವಣಪ್ರತಿಭೆ'ಯ ಕವಿ. ಕಣ್ಣನ್ನೇ ಕಿವಿಯಾಗಿಸಿ ಸೌಂದರ್ಯಾರಾಧನೆ ಮಾಡಿದ ಕವಿ. ಶ್ರಾವಣ ಮಾಸದಲ್ಲಿ ಧಾರವಾಡದ ಆಕರ್ಷಕ ನಿಸರ್ಗಸೌಂದರ್ಯವನ್ನು ಅನುಭವಿಸಿದ ಕವಿಯ ಆನಂದ ಶ್ರಾವಣದ ಹಾಡುಗಳಾಗಿವೆ. ಶ್ರಾವಣಮಾಸವು ಸುಖ-ಸಂತೋಷ, ಬೇಸರ-ದುಃಖ ಮೇಳೈಸಿ ತರುವ ಮಾಸವಾಗಿದೆ.

'ರಸವೆ ಜನನ
ವಿರಸಮರಣ
ಸಮರಸವೇ ಜೀವನ'

ಎಂಬ ತತ್ವ ಬೋಧಿಸಿದ ಮಾಸವಾಗಿದೆ. ಶ್ರಾವಣ ಬೇಂದ್ರೆಯವರಿಗೆ ಭಗವಾನ್ ಶ್ರೀಕೃಷ್ಣನ ಜನನ, ಮಹರ್ಷಿ ಅರವಿಂದರ ಜನನ; ತನ್ನ ಮಕ್ಕಳಾದ ವಾಮನ, ಮಂಗಲಾರ ಜನನ ಹಾಗೂ ರಾಷ್ಟ್ರಕ್ಕೆ ಸ್ವಾತಂತ್ರ್ಯತಂದ ರಸಾನಂದದ ಮಾಸವಾಗಿದೆ. ಹಾಗೆಯೆ ಗೆಳೆಯ ಮಧುರಚೆನ್ನ (ಹಲಸಂಗಿ ಚೆನ್ನಮಲ್ಲಪ್ಪ) ತಾಯಿ ಅಂಬವ್ವ, ಪತ್ನಿ ಲಕ್ಷ್ಮೀಬಾಯಿ ತೀರಿಕೊಂಡ ನೋವಿನ ಮಾಸವಾಗಿ 'ಸಮರಸವೇ ಜೀವನ' ಎಂದು ಕವಿಭಾವ ಬೆಳಗುವಂತೆ ಮಾಡಿದೆ. ಅವರಿಗೆ ಶ್ರಾವಣದಲ್ಲಿ ಭೂಮಿತಾಯಿಯು ಹೂವಿನ ಹಡಲಿಗೆಯನ್ನು ಹೊತ್ತ ಜೋಗಿತಿಯಂತೆ ಮೈದುಂಬಿ ಕುಣಿಯುತ್ತಿದ್ದಾಳೆ.

---

೧.. 'ಶ್ರೀನಿವಾಸ' ಕಾವ್ಯನಾಮದ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು, 'ಮುನ್ನುಡಿ' ದ.ರಾ.ಬೇಂದ್ರೆ, ನಾದಲೀಲೆ, ಶ್ರೀಮಾತಾಪ್ರಕಾಶನ, ಧಾರವಾಡ ೧೯೮೯, ಪುಟ. ೧೬,೧೭

'ಹೂವ ಹಡಲಿಗೆಯನ್ನು ಹೊತ್ತ
ಭೂಮಿತಾಯಿ ಜೋಗಿತಿ
ಮೈತುಂಬಿ ಕುಣಿಯುತಿಹಳ
ನಂತ ಕಾಲವೀಗತಿ'

## ಶ್ರಾವಣಕತಪ್ಪಿತಾಗ್ಯಾನಾ

ಬೇಂದ್ರೆಯವರು ಶ್ರಾವಣವನ್ನು ಕುರಿತು 'ಮತ್ತ ಶ್ರಾವಣಾ' 'ಶ್ರಾವಣದ ಹಗಲು', 'ಶ್ರಾವಣಾ', 'ಮಿಂಚು', 'ಮತ್ತೆ ಬಂತು ಶ್ರಾವಣಾ' ಎಂಬ ಹಲವಾರು ಕವನಗಳನ್ನು ರಚಿಸಿದ್ದಾರೆ. ಅವರಿಗೆ ಶ್ರಾವಣ ಕುರಿತು ಕಾವ್ಯ ರಚಿಸುವುದೇ ಆನಂದವಾಗಿತ್ತು. 'ಪ್ರತಿವರ್ಷದಂತೆ ಬಂತು ಶ್ರಾವಣಾ' ಎಂಬ ಕವನದಲ್ಲಿ ಶ್ರಾವಣವನ್ನು ಜಗದಜೀವನಾ, ಕರುಳಹೂವಣಾ, ಇದು ಜೀವದಾಕರ್ಷ ಎಂದು ಬಣ್ಣಿಸುತ್ತ 'ಅಂಬಿಕಾತನಯದತ್ತ'ರು ಅದರ ಹುಚ್ಚಿನಲ್ಲಿ ಮದೋನ್ಮತ್ತರಾಗಿದ್ದಾರೆ.

'ಶ್ರಾವಣಕ ತಪ್ಪಿತಾಗ್ಯಾನಾ
ಎಲ್ಲಿದೋ ಧ್ಯಾನಾ
ಹುಚ್ಚ ಆಗ್ಯಾನಾ
ಮದೋನ್ಮತ್ತಾ
ಅಂಬಿಕಾತನಯದತ್ತ,'

## I ನಿಗಿನಿಗಿಮುಗಿಲು

ಬೇಂದ್ರೆಯವರು ಎರಡು ಋತುಗಳ ಚಿತ್ರವನ್ನು ಶಬ್ದದಲ್ಲಿ ಹಿಡಿದಿಟ್ಟಿರುವ ಅನನ್ಯ ರೀತಿಯ ಕವನ 'ನಿಗಿನಿಗಿ ಮುಗಿಲು' (ರಚನೆ:೧೯೨೬). ಈ ಕವನದ ಮೂರು ನುಡಿಗಳಲ್ಲಿ ಎರಡು ನುಡಿಗಳು ಬಿಸಿಲುಗಾಲದ ತೀವ್ರತೆಯನ್ನು ಅಷ್ಟೇ ಬಿಸಿಯಾದ ಭಾಷೆಯಲ್ಲಿ ಅದರ ಕಾವು ಬೇಗೆಗಳಲ್ಲಿ ಹಿಡಿದಿಟ್ಟಿದೆ. ಮೂರನೇ ನುಡಿ ಮಳೆಗಾಲದ ಆನಂದವನ್ನು ಶಬ್ದಗಳಲ್ಲಿ ನಗುವಂತೆ ಮಾಡಿದೆ. ಪ್ರತಿ ಶಬ್ದದ ನಾದ, ಲಯ, ತಾನವನ್ನು ಅರಿತ ಬೇಂದ್ರೆಯವರು ಮಾತ್ರ ಕೆಲವೇ ನುಡಿಗಳಲ್ಲಿ ಬಿಸಿಲು ಮತ್ತು ಮಳೆಯನ್ನು ಹೀಗೆ ಕಾವ್ಯಾನುಭವವಾಗಿಸಬಲ್ಲರು.

ಬಿಸಿಲಬೇಗೆಯ ಭೀಕರತೆ ಪ್ರಾಸ, ಅನುಪ್ರಾಸಗಳಲ್ಲಿ ತನ್ನ ಝಳವನ್ನು ಹೆಚ್ಚಿಸಿಕೊಳ್ಳುತ್ತಾ ಕಾದು ಕೆಂಡವಾಗಿದೆ. ಆ ಕಾವಿನ ಕಾರುವಿಕೆಗೆ ಒಳಗಾದ ಜೀವ ವಿಲವಿಲನೆ ಒದ್ದಾಡಿ, ಉಸಿರುಗಟ್ಟಿ ಹಬೆಯಲ್ಲಿ ಪ್ರಾಣ ಹೋದಂತಾದ ನುಡಿಚಿತ್ರ ಬೇಸಿಗೆಯ ಕಾವ್ಯಾನುಭವ.

'ನಿಗಿನಿಗಿ ಮುಗಿಲು
ನಿಗಿನಿಗಿ ಹಗಲು
ಕೆಂಡವಕಾರುವದು;
ಮೈದೊರೆದೆತ್ತಲು
ಪ್ರಾಣವು ಬತ್ತಲು
ನೆತ್ತಿಲಿ ಹಾರುವದು'

ತೀವ್ರವಾದ ಬಿಸಿಲಿನಿಂದ ನೀರು ಇಂಗಿಹೋದ ಪರಿಸರದಲ್ಲಿ ಗಿಡಮರಗಳು, ಪ್ರಾಣಿಪಕ್ಷಿಗಳು ಹಾಗೂ ಮನುಷ್ಯರು ತತ್ತರಿಸಿ ಹೋಗಿದ್ದಾರೆ. ಬಿಸಿಯುಸಿರಿನ ಗಾಳಿಯಿಂದ ಗಿಡಮರದಲ್ಲಿ ಪಸೆ ಇಲ್ಲವಾಗಿ ಅದರಲ್ಲಿಯ ಕಾಯಿ ಹಣ್ಣಾಗಲಾಗದೆ ಉದುರಿ ಹೋಗುತ್ತಿದೆ. ಅದೇ ರೀತಿ ಮನುಷ್ಯನ ಬಾಯಿ ಆರಿ ಅವನ ಕಾಯವೂ ಕುಸಿಯುತ್ತಿದೆ. ಜೀವಕೋಟಿಯ ಉಸಿರಾಟದ ಉಳಿವಿಗೆ ತಂಗಾಳಿ ಬೇಕು. ಆದರೆ ಬೇಸಿಗೆಯ ಬಿಸಿಯುಸಿರಿನ ಗಾಳಿ ಬೇಗೆಯನ್ನು ಹಾಡುತ್ತಾ ಆಕಾಶವನ್ನೇ ಈಸಿಕೊಂಡು ದೈತ್ಯಾಕಾರವಾಗಿ ಮೈತಾಳಿಕೊಂಡು ಎಲ್ಲವನ್ನು ಕಬಳಿಸುತ್ತಿದೆ. ಹೊರಗಿನ ಬಿಸಿಲಿನ ತಾಪವನ್ನು ಆರಿಸಿ, ಉದಿರಿಸಿ, ಬೀಸಿ ಆಗಸವೀಸಿ ಎಂಬ 'ಸ' ಕಾರ ಪ್ರಾಸದಲ್ಲಿ ಚಿತ್ರಿಸಿ ಕೆಂಡದ ಒಳಗಿನ ಬಿಸಿಯ ಕಾವನ್ನು ನೀಡಿದ್ದಾರೆ. ಇಲ್ಲಿ ಪ್ರತಿಶಬ್ದ ಕಾವನ್ನು ಕಾರುತ್ತಿದೆ.

ಆರಿಸಿಬಾಯಿ
ಉದಿರಿಸಿ ಕಾಯಿ
ಬಿಸಿಯುಸಿರಿನ ಗಾಳಿ;
ಬೇಗೆಯ ಬೀಸಿ
ಆಗಸವೀಸಿ
ಬರುತಿದೆ ಮೈತಾಳಿ.

ಅಷ್ಟು ತೀವ್ರವಾಗಿ ಬಿಸಿಲು ದೈತ್ಯಾಕಾರವಾಗಿ ಕುಣಿದು ತಾನೇ ಬೆವರಿದ ನಂತರವೇ ಮಳೆಬೀಳುವುದು ಎಂಬ ಪ್ರತಿಮೆಯನ್ನು ಬೇಂದ್ರೆಯವರು ಆಧ್ಯಾತ್ಮ ಚಿಂತನೆಯ ಕವನ 'ಜೋಗಿ'ಯಲ್ಲಿ ಬಳಸಿದ್ದಾರೆ. 'ಬಿಸಿಲು ಕುಣಿದು ಬೆವತದ ಈಗ ಬಂದದ ಮಳಿಯ ಹದಕ'. ಈ ಹದಕ್ಕೆ ಬಂದ ತಕ್ಷಣ ದೂರದಲ್ಲಿ ಮೋಡಗಳ ಮರೆಯಲ್ಲಿ 'ಮಳೆಕಾಲೂರುತ್ತದೆ'. ಈ ಜನಪದ ನುಡಿ ಈಗಲೂ ಹಳ್ಳಿಗರ ನಾಲಗೆಯ ಮೇಲೆ ಮಳೆ ಬರುವ ಸೂಚನೆ ನೀಡುವ ಪದವಾಗಿದೆ. ಕವನದ ಮೂರನೆ ನುಡಿಯ ಶಬ್ದಗಳು ಮಳೆಯಲ್ಲಿ ತೋಯ್ದಂತೆ ಆರ್ದ್ರವಾಗಿದೆ. ಮಳೆಕಾಲೂರಿದ ತಕ್ಷಣ ಬೆಳೆ

ಕತ್ತೆತ್ತುತ್ತದೆ. ಮೊದಲಭಾಗದ ನಿಗಿನಿಗಿ ಮುಗಿಲು ಈ ನುಡಿಯಲ್ಲಿ 'ಹನಿಯೊಡೆಯಿತು ಮೋಡ' ಆಗಿದೆ. ಪ್ರಕೃತಿಯಲ್ಲಿ ಸಾವು ತರುವಂತಹ ಕೊಲ್ಲುವ ಶಕ್ತಿ ಇದ್ದಂತೆ, ಜೀವಪೋಷಕವಾದ ಕಾಪಾಡುವ ಚೈತನ್ಯವೂ ಇದೆ ಎಂಬುದನ್ನು ಕವಿ ಮುಗಿಲು, ಮೋಡ ಪದಗಳಲ್ಲಿ ಅದು ರೂಪಾಂತರಗೊಳ್ಳುವುದನ್ನು ಸೂಕ್ಷ್ಮವಾಗಿ ನೀಡಿದ್ದಾರೆ. ಮಳೆ ಬಿದ್ದ ತಕ್ಷಣ ಇಡೀ ಪ್ರಕೃತಿ ಮೈಕೊಡವಿ ಮೇಲೆದ್ದು ಉಲ್ಲಾಸಮಯವಾಗಿದೆ. ಬೆಳಗು ಉಂಟಾದ ತಕ್ಷಣ 'ಗಿಡಗಂಟೆಯಾಕೊರಳೊಳಗಿಂದ । ಹಕ್ಕಿಗಳ ಹಾಡು । ಹೊರಟಿತು–ಹಕ್ಕಿಗಳಾ ಹಾಡು' ಎಂಬಂತೆ ಇಡೀ ಪ್ರಕೃತಿ ಒಂದಾಗಿ ಹಕ್ಕಿಯ ದನಿಯಲ್ಲಿ ಹೊಮ್ಮುತ್ತದೆ. ಅದೇರೀತಿ ಮೋಡ ಹನಿಯೊಡೆದ ತಕ್ಷಣ ಪ್ರಕೃತಿಯಲ್ಲಿ ಜೀವೋಲ್ಲಾಸದ ಆನಂದ ಮಿಂಚುತ್ತದೆ. ಅದು ದೇವನ ಕರುಣೆ. ಅದು ಹಕ್ಕಿಯ ದನಿಯಾಗಿ ವರ್ಷ ದಯೆಯ ಹರ್ಷವನ್ನು ಉಂಟುಮಾಡಿದ್ದನ್ನು ಸಾರುತ್ತಿದೆ.

ಕಿಲಿಕಿಲಿ ಹಕ್ಕಿ
ಕುಲುಕುಲುನಕ್ಕಿ !
ದಯೆಗರೆಯಿತು ನೋಡಾ !

## II ಶ್ರಾವಣ

'ಶ್ರಾವಣ' ಕವನದಲ್ಲಿ ಒಟ್ಟು ಮೂರು ನುಡಿಗಳಿದ್ದು, ಮೊದಲನುಡಿ ಶ್ರಾವಣದ ಹುಟ್ಟನ್ನು, ಎರಡನೆ ನುಡಿ ಅದರ ಆಟಪಾಟದ ತುಂಟ ಹುಡುಗತನವನ್ನೂ, ಮೂರನೆ ನುಡಿ ಅದು ನೀಡಿದ ಆನಂದವನ್ನು ಬಣ್ಣಿಸಿದೆ. ಶ್ರಾವಣ ಬೇಂದ್ರೆಯವರಿಗೆ 'ಹಸಿರಿನ ಹುಸುಗೂಸು' ಆಗಿ ದೂರದ ನೆಲದ ಮುಗಿಲ ಮಗ್ಗುಲಲ್ಲಿ ಹೊರಳಿ ಒರಲುತ್ತಿದೆ. ಅದು ಬೆಳಕಿನ ಬಸಿರಿನಿಂದ ಬಂದುದು. ಅದು ವೈಜ್ಞಾನಿಕ ಸತ್ಯ. ಅದು'ಆ ಹಸಿರ ಒಳಗೆ ಹೊರಗೆ । ನೀರಬೆಳಕ ತುಣುಕು ಮಿಣುಕು' ಆಗಿದೆ. ಅದು ಬಾಗಿ ಬಳುಕಿ ಹೊಳೆಯುತ್ತ ಬಂದದ್ದನ್ನು ಚಿತ್ರಕ ಶೈಲಿಯಲ್ಲಿ ಬೇಂದ್ರೆ 'ಕುಣಿವ ಮಣಿವ ಹೆಡೆಯಹಾವುಗಳನ್ನು ಹಿಡಿದು ತಂದೆಯಾ?' ಎಂದು ಪ್ರಶ್ನಿಸಿದ್ದಾರೆ. ಆ ಪ್ರಶ್ನೆಯಲ್ಲಿ 'ಹಸಿರಿನ ಹಸುಗೂಸು' ನೆಲದ ಹಸಿರಿಗಾಗಿ, ನೆಲದ ಜೀವಿಗಳ ಹುಟ್ಟಿಗಾಗಿ ಅವತರಿಸಿದೆ ಎಂಬ ಭಾವವಿದೆ. ಮಗುವಿನಂತೆ ಶ್ರಾವಣವನ್ನು ಅವರು ಪ್ರಶ್ನಿಸುತ್ತಾರೆ. 'ಏಕೆ ಬಂದೆ? ಏನು ತಂದೆ?' ತಂದೆ ಎಂಬ ನುಡಿಯಲ್ಲಿ ಏನನ್ನು ತೆಗೆದುಕೊಂಡು ಬಂದೆ ಎಂಬ ಅರ್ಥವಿರುವಂತೆ ಜಗದ ಜಡಚೇತನದ ಸೃಷ್ಟಿಯ ಚೈತನ್ಯವಾದ ತಂದೆ ಎಂಬ ಭಾವವೂ ಇದೆ. ಇದು ಬೇಂದ್ರೆ ಪ್ರಯೋಗದ ಶ್ಲೇಷೆ. ಆ ಪ್ರಶ್ನೆಯಲ್ಲಿ ಉತ್ಸಾಹ, ಕುತೂಹಲವಿದ್ದು ಅದು ಬಂದಕಾರಣ ಸ್ವಯಂವೇದ್ಯವಾಗಿದೆ.

ಎರಡನೆಯ ನುಡಿಯಲ್ಲಿ ಬೇಂದ್ರೆಯವರು ಅದು ಬಂದ ಬಗೆಯಲ್ಲಿಯೇ ಪ್ರಕೃತಿಯಲ್ಲಿ ಉಂಟಾದ ಉಲ್ಲಾಸ, ಆನಂದ, ಜೀವನೋತ್ಸಾಹವನ್ನು ವರ್ಣಿಸಿದ್ದಾರೆ. ಅದರ ಚಲನಶೀಲತೆಯೇ ಸೃಜನಶಕ್ತಿಯ ವೈಭವ. ಆ ಶ್ರಾವಣ ಗಾಳಿಕುದುರೆಯನ್ನು ಏರಿ ಪರ್ಜನ್ಯಗೀತ ಹಾಡುತ್ತ ಬಂದಿದ್ದಾನೆ. ಮಕ್ಕಳ ಮನಸ್ಸಿನ ಮುಗ್ಧತೆ ಕಾವ್ಯ ಭಾಷೆಯಾಗಿ, 'ಗಾಳಿಕುದುರೆ' ಏರಿಬಂದ ಮಳೆಯಾಗಿದೆ. ಇಡೀ ವನವೇ ಒಂದಾದ ಮನದಿಂದ 'ಸೊಃ' ಎಂದುಮಂಗಳ ಹಾಡಿ ಅದನ್ನು ಸ್ವಾಗತಿಸಿದೆ. ಆ ಮಂಗಳ ಭಾವಕ್ಕೆ ಶ್ರಾವಣವು ಬಿದಿರಿಗೆ ಕೊಳಲಾಗಿ, ಮಲೆಗೆ ಜಡೆಹೆಣೆದು ಸುಂದರಗೊಳಿಸಿ, ಬಳ್ಳಿಮಾಡಕ್ಕೆ ಸೊಬಗುತಂದು ಗಿಡಗಳು ತಲೆದೂಗುವಂತೆ ಮಾಡಿದೆ. ಅವುಗಳ ನಾದ ಸುಂದರ ಒಲೆದಾಟದಲ್ಲಿ ಶ್ರಾವಣನ ಕಲ್ಯಾಣ ಭಾವದ ಒನೆದಾಟವಿದೆ. ಅದು ತೊಟ್ಟದ್ದು ಎಂದರೆ ಅದರ ಫಲವೇ ಆದ ಗುಲಗಂಜಿ ಮತ್ತು ಹಾವಸೆ. ಅದು ಆನಂದಮಯ ತರಳ.

ಶ್ರಾವಣ 'ನಗುತುಟಿಯ ನನೆದೆ ಎದೆಯ' ವನಾದರೂ ಹಗಲ ಬೆಳಕಿನೊಡನೆ ಅವನ ಆಟನೋಡಿದ ಕವಿಗೆ 'ಅಳಲು ನಗಲು ತಡವೆ' ಇಲ್ಲದಂತಹವನಾಗಿ ಕಂಡಿದ್ದಾನೆ. ಅವನು ದೇವಲೋಕದ ದಿವ್ಯ ಚೇತನವಾದ ಗಂಧರ್ವ, ಜಗದ ಮಂಗಳ. ಹಾಗಾಗಿ ಬೇಂದ್ರೆ ಶ್ರಾವಣವನ್ನು 'ಬಾರೋ ದಿವ್ಯ ಚಾರಣಾ। ತುಂಟ ಹುಡುಗ ಶ್ರಾವಣಾ' ಎಂದಿದ್ದಾರೆ.

ಬೇಂದ್ರೆಯವರಿಗೆ ಶ್ರಾವಣಮಾಸ ವಸಂತಋತುವಿನ ಮಧುಮಾಸಕ್ಕೂ ಹಿರಿದಾಗಿ 'ಮಧುರಮಾಸ' ವಾಗಿದೆ. ಆ ಮಧುರ ಭಾವನೆ ಆ ಮಾಸದಲ್ಲಿ ಹೆಣ್ಣು ಮಕ್ಕಳು ಹಬ್ಬ ಹರಿದಿನಗಳಂದು ತವರು ಮನಗೆ ಬಂದು ಹೋಗುವ 'ಮಧುರಮಾಸ' ವೂ ಆಗಿದೆ. ನೆಲದಿಂದ ಹುಟ್ಟಿ, ಮುಗಿಲುಸೇರಿ ಮತ್ತೆ ನೆಲಸೇರಿದ ಮಳೆಯ ಮಧುಭಾವವೂ ಆಗಿದೆ.

ಮಳೆಯಂತಹ ಪ್ರಕೃತಿ ಸಹಜ ಕ್ರಿಯೆಯನ್ನು ವೈಜ್ಞಾನಿಕ ನೆಲೆಯಲ್ಲಿ ಅರ್ಥೈಸುತ್ತಲೇ ಮಧು ಕಾವ್ಯಾನುಭವವಾಗಿಸಿರುವುದು ಬೇಂದ್ರೆಯವರ ವೈಶಿಷ್ಟ್ಯವಾಗಿದೆ. ಶ್ರಾವಣದ ತಾಯಿ 'ಭೂಮಿತಾಯಿ' ಬಿಸಿಲ ಹಣ್ಣನ್ನು ತಿಂದು ಅವನನ್ನು ಹೆತ್ತಿದ್ದಾಳೆ. ನೆಲದ ನೀರು ಕಾದುಕಾದು ಉಗಿಯಾಗಿ ಮುಗಿಲು ಸೇರಿದೆ. ಆ ಮುಗಿಲರಾಯ ಶ್ರಾವಣನ ಮುದಿತಂದೆ 'ಮೋಡಗಣ್ಣಿನವನು'. ಅವನು ಶ್ರಾವಣವನ್ನೇ ಬಯಸಿದ್ದಾನೆ. ಭೂಮಿತಾಯಿಯೂ ಶ್ರಾವಣನನ್ನೆ 'ನೆನಸಿತು । ಎದೆಯ ಸೆರಗ ನನೆಸಿತು'. ಅದರ ಫಲವಾಗಿ ಶ್ರಾವಣಬಿದ್ದ ಎಂಬ ಚಿತ್ರಣ ನೀಡಿದ್ದಾರೆ. ಶ್ರಾವಣ ದ್ಯಾವಾ ಪೃಥ್ವಿಯ ದಾಂಪತ್ಯದ ಸಂಕೇತ. ಜಗದ ಜೀವಿಗಳ ಸೃಜನ ಶಕ್ತಿಯ ಸಂಕೇತ.

## III ಋತುಗಾನ

ಬೇಂದ್ರೆಯವರು 'ಋತುಗಾನ' ಕವನದಲ್ಲಿ ಋತುಗಳು ಬದಲಾದಂತೆ ನಿಸರ್ಗದಲ್ಲಿ ಉಂಟಾಗುವ ಏರಿಳಿತವನ್ನು ಬಣ್ಣಿಸುತ್ತ, ಅದರಲ್ಲಿಯ ಆಕರ್ಷಣೆಯತ್ತ ಗಮನಹರಿಸಿದ್ದಾರೆ. ಋತುಗಳಿಗೆ ಸ್ಪಂದಿಸಿದ ನೆಲ ಮತ್ತು ಮುಗಿಲಿನ ಬಾಂಧವ್ಯವನ್ನು ದಾಂಪತ್ಯದ ಸವಿಯಲ್ಲಿ ಬಣ್ಣಿಸಿದ್ದಾರೆ. ಕವನದ ಮೊದಲ ನುಡಿಯಲ್ಲಿ ಆ ದಂಪತಿಗಳ ಸಮತುಷ್ಟಿ, ಪುಷ್ಟಿ, ಆನಂದ, ಆಕರ್ಷಣೆಯ ಸೇರುವಿಕೆಯನ್ನು ನಕ್ಷತ್ರ, ಹೂ, ಕೆಂಬೆಳಕಿನ ಪ್ರತಿಮೆಗಳಲ್ಲಿ ಹಿಡಿದಿಟ್ಟಿದ್ದಾರೆ. ಬೇಸಿಗೆ ಕಾಲದ ವಸಂತಋತುವಿನಲ್ಲಿ ರಾತ್ರಿಯ ಆಕಾಶ, 'ದೇವರ ರತ್ನಾಭರಣದ ನಕ್ಷತ್ರದ ಲೋಕ'ವಾಗಿದ್ದು, ಹಗಲಿನ ಭೂಮಿಯ ನೆಲ, ಮಲೆ ಮರದಲ್ಲಿ ವಿಜೃಂಭಿಸಿದ ಪುಷ್ಪಲೋಕಕ್ಕೆ ಸರಿಸಮನಾಗಿ ಆಗ ರಾತ್ರಿ ಮತ್ತು ಹಗಲಿನ ಕಾಲವು ಸರಿಸಮನಾಗಿರುತ್ತದೆ. ಅವುಗಳ ಮಿಲನದ ಸಂಜೆ, ಮುಂಜಾವಿನ ಕ್ಷಿತಿಜ 'ಕೆಂಬೆಳಕಿನ ಸಮಪಾಕ' ಹೊಂದಿವೆ.

ಮಳೆಗಾಲದ ಶ್ರಾವಣ ಮಾಸವು ದ್ಯಾವಾ ಪೃಥ್ವಿಯ ಮಿಲನದ ಕಾಲ. ಅದರ ವೈಭವ ಸೃಷ್ಟಿಕ್ರಿಯೆ. ಅದು ಜನನ ಮರಣದ, ಸುಖದುಃಖದ ಅನುಭವದ ಮಾಸ. ಆಗ ಉಂಟಾಗುವ ಕಡಲ ಏರಿಳಿತ, ಬೀಜಮೊಳೆತ ಪ್ರತಿಮೆಗಳು ದಾಂಪತ್ಯದ ಸಂಕೇತಗಳಾಗಿವೆ.

'ನೆಲದಪ್ಪುಗೆಯುಕ್ಕಂದಕೆ ಕಡಲೇರಿಳಿವಾಟ
ಪಡುಮೂಡಲ ಕಾರ್ನೀರನು ಎರೆವೆಲರಿನ ತೀಟ;
ಬೀಳುವ ಬೀಜವೆ ಮೊಳೆತಿರೆ, ತೆನೆಹಿಡಿಯುವಮಾಟ,
ಇಗೊ ಮರಣವು, ಅಗೊ ಜನನವು, ಜೀವನದುಸಿರಾಟ.'

ಮೂರನೆಯ ನುಡಿಯಲ್ಲಿ ಚಳಿಗಾಲದಲ್ಲಿ ದಾಂಪತ್ಯಮಾಗಿದ ಅನುಭವವನ್ನು ಕವಿ ನೀಡಿದ್ದಾರೆ. ಆ ಕಾಲ ಅವರನ್ನು ಬಂಧಿಸಿರುವುದು, ಅದರ ನಗೆ, ಒಡೆದ ತುಟಿಯ ಬೆಲ್ಲದ ಸವಿ ಚಳಿಗಾಲದ ದಾಂಪತ್ಯ ವೈಭವವಾಗಿದೆ. ಕವಿಯ ನುಡಿಯನ್ನೇ ಅದರ ರುಚಿಗಾಗಿ ಸವಿಯ ಬೇಕಾಗಿದೆ.

'ಒಂದಾಗುತ ಹೊಂದಿಸಿಕೊಳುತನುರಾಗದ ಮರುಳು,
ಮಂದಸ್ಮಿತ ಮೈಗೂಡಿಸಿ ಕುಂದದ ನಗೆಗಳೊಲು,
ಬೆಲ್ಲದಸವಿ ಕುಸುರಿಡುತಿರೆ ಒಡೆದಿಹ ತುಟಿಗಳೊಳು
ಚಳಿಗಾಲಕೆ ಚಿಗುರಿಟ್ಟಿತು ದಾಂಪತ್ಯದ ತಿರುಳು'

ಈ ಜೀವನವೂ ಒಂದು ಋತುಗಾನದಂತೆ. ಋತುಗಳ ಏರಿಳಿತ ಬದಲಾವಣೆಯಲ್ಲಿ ಹೊಸತನವಿದೆ. ಆ ನವನವೀನ ಜೀವಂತಿಕೆಯನ್ನು ನಮ್ಮದಾಗಿಸಿಕೊಂಡು ಅದರ

ಜೊತೆ ರಿಂಗಣ ಗುಣಿತಕ್ಕೆ ಹೆಜ್ಜೆ ಹಾಕಬೇಕು. ಆ ನಾದ ಲಯ ಕುಣಿತದ ತಾನದಲ್ಲಿ ಲೀನವಾಗಿ ಹೋಗಬೇಕು. ಆಗ ಬೇಂದ್ರೆಯವರು ನೀಡಿರುವ ಕವನದ ಭಾವ ಸಂದರ್ಭಸೂಚಿಯ 'ಋತುಗಳ ರಿಂಗಣಗುಣಿತದಲ್ಲಿ ಜೀವನದ ಅಮೃತ ಶ್ರುತಿಯೊಂದು ಕೇಳಿಸುವುದು'. ಪ್ರಕೃತಿಯ ಭಾಗವಾದ ಮಾನವ ಋತುಗಾನದ ಶ್ರುತಿಗೆ ಮನಸ್ಸುಕೊಟ್ಟು ಅದರ ಆಲಾಪನೆಯ ಲಹರಿಯಲ್ಲಿ ಸೇರಿದಾಗ ಬ್ರಹ್ಮಾಂಡದ ಮೌನ ತಲೆದೂಗಿ ಸಮ್ಮತಿಸುವುದು.

'ಕ್ಷಣಕ್ಷಣವೂ ಹೊಸ ಹೊಸದಿದು ಘನಗಗನ ವಿತಾನ
ದಿನ ದಿನ ಗ್ರಹಮಾಲೆಯ ರಿಂಗಣಗುಣಿತದ ತಾನ;
**'ತಿರುತಿರುಗಿಯು ಹೊಸತಾಗಿರಿ'** ಎನುತಿದೆ ಋತುಗಾನ,
ಈ ಹಾಡಿಗೆ ಶ್ರುತಿ ಹಿಡಿದಿದೆ ಬ್ರಹ್ಮಾಂಡದ ಮೌನ'

## IV ಚಿಗುರೆ

'ಕರು, ಗಿಳಿ, ಮಂಗ, ನಾಯಿ, ಅಳಿಲು ಇವೇ ಮೊದಲಾದ ಸತ್ತ್ವಗಳು ನನ್ನ ಜೀವನದಲ್ಲಿ ಒಂದು ಸ್ನೇಹ ಸಂಬಂಧದಿಂದ ಎಚ್ಚರಕೊಟ್ಟು ಹೋಗಿವೆ. ಚಿಗುರೆ ಹಾಗೆ ನೋಡಿದರೆ ಅದೇನದು? ಅದು ಅಂತಃಕರಣವನ್ನು ತಟ್ಟಿದಾಗ, ಕಣದಲ್ಲಿಯೂ ಕಡಲೇ ಉಕ್ಕೇರಿ ಬರುವದು. ಇಂಥ ಅನುಭವ ಮಿಂಚಿನಂತೆ ಇದ್ದರೂ ಅದರ ಸ್ಮೃತಿ ಹಾಗಲ್ಲ' ಎಂಬ ಭಾವ ಸಂದರ್ಭ ಹೊಂದಿದ 'ಚಿಗುರೆ' ಕವನ ಬೇಂದ್ರೆಯವರ ಪ್ರಾಣಿದಯಾರ್ದ್ರ ಹೃದಯವನ್ನು ಪರಿಚಯಿಸಿದೆ. 'ಎರಡೆ ದಿವಸ ಕೂಡಿ' ಇದ್ದ ಚಿಗುರೆ ಕವಿಯ ಮನಸ್ಸನ್ನು ಆವರಿಸಿದ ಸುಂದರ ಭಾವಲಹರಿ ಇದಾಗಿದೆ. 'ಹೊಗರುಗಣ್ಣು, ನಿಗುರಿದ ಕವಿ, ಹಗುರ ಮೈ' ಯಲ್ಲಿ ಅದರ ಪಂಚೇಂದ್ರಿಯಗಳ ಜಾಗೃತಿಯನ್ನು ತಿಳಿಸಿ ಅದರ ಪುಟಿವ ಜೀವಂತಿಕೆಯನ್ನು ಚಿತ್ರಿಸಿದ್ದಾರೆ. ಆದರೆ ದುರಾದೃಷ್ಟದಿಂದ ಅದು ಚಿಗುರಿನಂತೆ ಕಾಂತಿಹೀನವಾಗಿ ಮುದುಡಿ ಹೋದುದನ್ನು 'ತಿಗುರಳಿದಿತು ಚಿಗುರೊಲು' – ಚಿಗುರೆ ಚಿಗುರಿನಂತೆ ಕಾಂತಿ ಹೀನವಾಯಿತು ಎಂದು ಉಪಮಾನಾತ್ಮಕವಾಗಿ ಬಣ್ಣಿಸಿದ್ದಾರೆ.

'ಇತ್ತೊ ಇಲ್ಲೊ' ಎನ್ನುವ ಹಾಗೆ ಅದು ಬಂತು ಹೋಯ್ತು ಎಂದು ಹೇಳಿದ್ದಾರೆ. ಆದರೆ ಅದು ಬಂದಾಗ ಉಂಟಾದ ಆನಂದವನ್ನು, ಇಲ್ಲವಾದಾಗ ಉಂಟಾದ ನೋವನ್ನು 'ಆಹಾ ಎನಿಸಿ, ಅಯ್ಯೋ ಅನಿಸಿ' ಎಂಬ ಕ್ರಿಯಾ ಪದಗಳಲ್ಲಿ ಹಿಡಿದಿಟ್ಟಿದ್ದಾರೆ. ಒಂದು ನುಡಿ ಮನಸ್ಸಿನ ಆನಂದದ ಸೂಚಕವಾದರೆ, ಇನ್ನೊಂದು ನೊಂದ ಜೀವದ ಅರಿವಾಗಿದೆ. ಒಂದು ಸುಂದರ ನಿರುಪದ್ರವಿ ಪ್ರಾಣಿ ಅವರಲ್ಲಿ ಉಂಟುಮಾಡಿದ ಸ್ನೇಹಬಂಧ ಅವರ ಚಿತ್ತದಲ್ಲಿ ಚಿತ್ರವಾಗಿ ನಿಂತಿದೆ.

'ಭಾವ ಭ್ರಮೆಯಿದು ಎಂದಿತು
ಜೀವವೇಕೋ ನೊಂದಿತು'

ಪ್ರಾಣಿ–ಮಾನವ ತರತಮ ಆಲೋಚನೆಯಲ್ಲಿ ಅದು ಇಲ್ಲವಾದುದಕ್ಕೆ ಭ್ರಮೆ ಎನಿಸಿದರೂ: ಅದು ಒಂದು ಜೀವ, ಉತ್ಸಾಹದ ಚಿಲುಮೆ, ತನ್ನಲ್ಲೂ ಅಂತಹದೇ ಜೀವಂತಿಕೆ ಚಿಮ್ಮಿತು ಎಂದಾಗ ಜೀವವೇಕೊ ನೋಯುತ್ತದೆ. ಈ ಪ್ರಾಣಿದಯೆಯ ಮನುಷ್ಯನನ್ನು ಕವಿಯಾಗಿಸಿ ಅನಂತಶಕ್ತನ ಕಿರಣ ಪ್ರತಿ ಜೀವ ಎಂಬ ಭಾವವನ್ನು ಹೊಮ್ಮಿಸುತ್ತದೆ.

## V ಬೆಳುದಿಂಗಳ ನೋಡs

ಬೇಂದ್ರೆಯವರು 'ಬೆಳುದಿಂಗಳ ನೋಡs' ಕವನವನ್ನು ಕುರಿತು 'ಇಲ್ಲಿಯ ಉತ್ಪ್ರೇಕ್ಷಾಮಾಲೆಯಿಂದ ಬೆಳದಿಂಗಳ ಮಾಯೆಯ ಅಮೋಘ ಪರಿಣಾಮವನ್ನು ವರ್ಣಿಸಿದ್ದಾಗಿದೆ' ಎಂದು ಹೇಳಿದ್ದಾರೆ. ಅವರ ಸೂರ್ಯೋದಯದ 'ಬೆಳಗು' ಮತ್ತು ಚಂದ್ರೋದಯದ 'ಬೆಳುದಿಂಗಳ ನೋಡs' ಕನ್ನಡಕಾವ್ಯಲೋಕದಲ್ಲಿ ಸದಾ ಹೊಳೆವ ನಕ್ಷತ್ರಗಳಾಗಿವೆ. 'ಬೆಳುದಿಂಗಳ ನೋಡ' ಹಾಡಾಗಿ ರಸಿಕರ ಹೃದಯೋಲ್ಲಾಸವಾಗಿದೆ. ಇದು ಲಾವಣಿಗತ್ತಿನ ಜಾನಪದ ನುಡಿ ಸೊಬಗಿನಿಂದ ಕೂಡಿದೆ.

ಈ ಕವನ 'ಬೆಳುದಿಂಗಳ ನೋಡ । ಬೆಳುದಿಂಗಳ ನೋಡು ।' ಎಂಬ ಪಲ್ಲವಿಯಿಂದ ಸಹೃದಯನನ್ನು ತನ್ನತ್ತ ಸೆಳೆದು ತನ್ನ ನಾದ, ಆಹ್ಲಾದದಲ್ಲಿ ಮುಳುಗಿಸಿದೆ. 'ಇದು ಮಾಯಕಾರರ ಬೀsಡs' ಎಂಬ ಕವಿಯ ನುಡಿಯ ಮಾಯಾಲೋಕದಲ್ಲಿ ತೇಲಿದ ಅನುಭವ ನೀಡಿದೆ. ಇದು ಹನ್ನೊಂದು ನುಡಿಗಳನ್ನು ಹೊಂದಿದ್ದು ಹನ್ನೊಂದು ಸುಂದರ ಚಿತ್ರಗಳನ್ನು ಒಳಗೊಂಡಿದೆ. ಬೇಂದ್ರೆಯವರು ಬೆಳುದಿಂಗಳ ಹುಟ್ಟನ್ನು ಸೂರ್ಯಾಸ್ತದ ಗೋಧೂಳಿ ಲಗ್ನದಿಂದ ಪ್ರಾರಂಭಿಸಿ; ಅದರ ವೈಭವ, ಸಂಪತ್ತು, ಸಮೃದ್ಧಿಯ ಜೊತೆಗೆ ಅದರ ಮಾಯಾಲೋಕದರ್ಶನ ಮಾಡಿಸಿದ್ದಾರೆ. ಅದರ ಗಂಧ ಸುಗಂಧದಿಂದ ಮನಕ್ಕೆ ಆಹ್ಲಾದವನ್ನುಂಟು ಮಾಡಿ ಸಮಾಧಿ ಸ್ಥಿತಿಯ ಏರುನೆಲೆಗೆ ಕೊಂಡೊಯ್ದಿದ್ದಾರೆ.

ಬೇಂದ್ರೆಯವರು ಕವನವನ್ನು ಸಂಜೆಯ ಮಂಗಳ ವಾತಾವರಣದ ವರ್ಣನೆಯಿಂದ ಪ್ರಾರಂಭಿಸಿದ್ದಾರೆ.

'ದನಕರದ ಕಾಲಿನ ಧೂಳಿ
ಸಂಜೆಯ ಹೂಳಿ
    ಮುಗಿಲ ಮುಟ್ಟ್ಯsದ
    ಮುಗಿಲ ಮುಟ್ಟ್ಯsದ ॥'

ಎಂದು ಈ ನೆಲದ ಪ್ರೀತಿಯ ಧೂಳು ಸಂಜೆಗೆಂಪಿನಲ್ಲಿ ಮಂಗಳಮಯವಾಗಿ ಆಕಾಶವನ್ನು ವ್ಯಾಪಿಸಿದೆ ಎಂದಿದ್ದಾರೆ. ಆ 'ಗೋಧೂಳಿ ಲಗ್ನ'ದಲ್ಲಿ ನೆಲದ ಪ್ರೀತಿಯ ಫಲವೆಂಬಂತೆ ಆಗಸದಲ್ಲಿ ಚಂದ್ರಿಕೆ ಚಂದ್ರಮರ ಜೋಡಿಯು ವಿವಾಹದ ಸಂಭ್ರಮದಿಂದ ಕೈಕೈಹಿಡಿದು ಕಂಗೊಳಿಸಿದ್ದಾರೆ.

ಆ ನಾಡಿಗೆ ಚಂದ್ರಮನೆ ಸ್ವಾಮಿಯಾದುದರಿಂದ ಅದನ್ನು 'ಹಾಲುಗಡಲಿನಽ ಸೀಮಿ'ಯಾಗಿಸಿದ್ದಾರೆ. ಆ ಹಾಲಿನ ಸಮುದ್ರದಲ್ಲಿ ಎಲ್ಲವೂ ಮೃದು, ಮಧುರ ನುಣುಪಾಗಿದೆ. ಕಪ್ಪಾಗಲಿ, ಕಪ್ಪಿನಕಲೆಯಾಗಲಿ ಎಲ್ಲೂ ಇಲ್ಲದಂತೆ ಅಳಿಸಿ ಹೋಗಿದೆ. ಅಂತಹ ಸುಂದರ ಚಪ್ಪರಕ್ಕೆ ಸಮನಾದುದು ಬೇರೆಯಾವುದೂ ಇಲ್ಲ. ಅಲ್ಲಿ ವಿವಾಹ ನೆರೆದಿದೆ. ಅಲ್ಲಿಯೇ ಎದುರಿನಲ್ಲಿ ಚಂದ್ರಮನ 'ಎದೆಯ ಕೆಂಪೆಳ್ಳುಗೆಳತಿ' ರೋಹಿಣಿ ನಲಿನಲಿಯುತ್ತ ನಿಂತಿದ್ದಾಳೆ. ಚಿಕ್ಕಿಗೆಳತಿಯರೆಲ್ಲಾ ಸೇರಿ 'ಕೃತ್ತಿಕೀಹಾರ'ವನ್ನು ಅವನಿಗೆ 'ಇದ್ದ ಬಿದ್ದ ಕೇಡ'ನ್ನು ಕಳೆಯಲು ತೊಡಿಸಿದ್ದಾರೆ. ರಾತ್ರಿಯ ಬೆಳದಿಂಗಳ ಸುಂದರ ನೋಟ ಕವಿಯ ಉತ್ಪ್ರೇಕ್ಷೆಯಲ್ಲಿ ವಿವಾಹಮಂಟಪವಾಗಿ ವಿಜೃಂಭಿಸಿದೆ.

ಅಲ್ಲಿ ನೆರೆದವರು ತಮ್ಮ ಮೆಚ್ಚಿನ ಮಾಟವನ್ನು ತೋರಲು ಮಂತ್ರಿಸಿದ ಬೂದಿ ಊದಿದ್ದಾರೆ. ಅದು ಹರಹಿಕೊಂಡು ಅದನ್ನು ನೋಡುತ್ತಿದ್ದ ನೆಲದ ಜನ ಮುಕ್ಕಾಲು ಪಾಲು ನಿದ್ದೆಗೀಡಾಗಿದ್ದಾರೆ. ಉಳಿದ ಕೆಲವು ಅರೆಹುಚ್ಚ ರಸಿಕರು ಎಚ್ಚತ್ತಿದ್ದಾರೆ.

'ಚಂದಿರನ ನಗೆ'ಯ ಬಣ್ಣನೆಗೂ ಕವಿ ಆ ಮಂಗಳ ವಿವಾಹದ ಗುಂಗಿನ ಹೋಲಿಕೆಯನ್ನೇ ನೀಡಿದ್ದಾನೆ. ಅದು 'ಮದುಮಗಳ ಕಣ್ಣಿನಽ ಬಗೀ'ಯಾಗಿದೆ. ಆ ನಗೆ ಸುತ್ತು ಹರಿದು ತನ್ನ ಆನಂದದಿಂದ ಕಂಡವರ ಬಾಳಿನ ನೋವನ್ನು ಮರೆಸಿ ಆಹ್ಲಾದದಿಂದ ತಂಪಾಗಿಸಿದೆ. ಹೀಗಾಗಿ 'ಇದುಮಾಯಕಾರರ ಬೀಡು' ಎನಿಸಿದೆ.

ಮದುಮಗಳ ಕಣ್ಣಿನಽಬಗೀ
ಚಂದಿರನ ನಗಿ
ಸುತ್ತ ಹರಿದಽದಽ
ಸುತ್ತ ಹರಿದಽದ ॥
ಕಂಡವರ ಬಾಳು ಮರಿಸ್ಯಽದ
ತಣ್ಣಗಿರಿಸ್ಯಽದ
ಇದುಮಾಯಕಾರರ ಬೀಽಡಽ
ಬೆಳುದಿಂಗಳ ನೋಡ ॥

ಆರನೇ ನುಡಿಯಲ್ಲಿ ಬೇಂದ್ರೆಯವರು ಚಂದಿರನ ನಗೆಯ ರುಚಿನೋಡಿದ ಟಿಟ್ಟಿಭ ಹಕ್ಕಿಗಾದ ಆನಂದವನ್ನು ಅನನ್ಯವಾಗಿ ವರ್ಣಿಸಿದ್ದಾರೆ.

'ಸೂಸಿರುವ ನಗಿಯ ಬಗಿ ಹೀರಿ
ಮದಾ ತಲಿಗೇರಿ–
ಧಾಂಗ ಟಿಂಹಕ್ಕಿ'

ಎಂಬ ಕಲ್ಪನೆಯಲ್ಲಿ ಟಿಟ್ಟಿಭವು ಅಲ್ಲಿ ಕಂಪಾಗಿ ಸೂಸಿರುವ ಚಂದಿರನ ನಗೆಯನ್ನು ಕೊಕ್ಕಿನಿಂದ ಬಗೆದು, ಸೀಳಿ ಹೀರಿದೆ. 'ಬಗಿ', 'ಹೀರಿ' ಕ್ರಿಯಾಪದಗಳು ಚಂದಿರನ ನಗೆಯ ಸವಿಯನ್ನು ಟಿಟ್ಟಿಭದ ಮೈಹೊಗಿಸಿದೆ. ಮದಾ ತಲೆಗೇರಿದಾಗ ಆ ಹಕ್ಕಿ ಚೀರಾಡಿ, ಹಾರಾಡುವಾಗ ಕಾಡು ಮೇಡು ಬೆಪ್ಪಾಗಿದೆ.

ಏಳನೇ ನುಡಿಯಲ್ಲಿ ಬೇಂದ್ರೆಯವರು ಮಾಯಕಾರರ ಬೀಡಿನಲ್ಲಿ ಅಮೂರ್ತವಾದ ಗಾಳಿಯನ್ನು ಹಕ್ಕಿಯಾಗಿಸಿದ್ದಾರೆ. ಗಾಳಿಯು ಆ ಬೆಳದಿಂಗಳ 'ಮರ ಮರದಗೊನಿಗೆ ಕೂತು, ಹಾರಿ' ನೋಡಿ ಆನಂದಿಸಿ ಮೈಸೋತು ತೆಪ್ಪಗಾಗಿದೆ. ಚಲಿಸದೆ ಸುಮ್ಮನೆ ಕುಳಿತುಕೊಳ್ಳಲು ಗಾಳಿಗೆ ಸಾಧ್ಯವಿಲ್ಲ. ಅದು ಜೀವಸಂಜೀವಿನಿ ಸದಾ ಕ್ರಿಯಾಶೀಲ. ಅದಕ್ಕಾಗಿ ಕವಿ ಆ ಗಾಳಿಯನ್ನು

'ತೂಕಡಸತಽದ ತಾನೀಗ
ಜಂಪು ಬಂಧಾಂಗ
ಜಂಪು ಬಂಧಾಂಽಗಽ
ಇದು ಅದರ ತುಪ್ಪಳದ ಗೂಽಡಽ
ಬೆಳುದಿಂಗಳ ನೋಡಽ ॥'

ಎಂದು ವರ್ಣಿಸಿದ್ದಾರೆ. ಬೇಂದ್ರೆಯವರು ಗಾಳಿ ಹಕ್ಕಿಯನ್ನು ತೂಕಡಿಸುವಂತೆ ಮಾಡಿ ಬೆಳದಿಂಗಳು ಅದಕ್ಕೆ ತುಪ್ಪಳದ ಗೂಡಾಗಿದೆ ಎಂದಿದ್ದಾರೆ. ಇದು ಬೇಂದ್ರೆಯವರ ಉತ್ಪ್ರೇಕ್ಷೆಯ ಗಾರುಡಿಗತನ.

ಎಂಟನೇ ನುಡಿಯಲ್ಲಿ ಗಾಳಿಯೊಡನೆ ತೇಲಿಬರುವ ಸುಗಂಧ ಹಾಗೂ ತಂಪು ಇದೆ. ಬೇಲಿಯ ಮೇಲೆ ಹೂ ಬಿಟ್ಟು ಕಂಗೊಳಿಸಿರುವ ಜಾಲಿಯ ಸುಗಂಧ, ಶ್ಯಾವಂತಿಗೆ ಕಂಪಿನೊಡನೆ ತರುವ ತಂಪಿನಲ್ಲಿ ಕವಿಗೆ 'ಇದು ಸಾಕು, ಬೇರೆ ಏನೂ ಬ್ಯಾಡಾ' ಎನಿಸಿದೆ. ಆದರೆ ಪಲ್ಲವಿ 'ಬೆಳುದಿಂಗಳ ನೋಡ' ಎಂದು ಮತ್ತೊಂದು ಪ್ರತಿಮಾ ಚಿತ್ರಣಕ್ಕೆ ತೊಡಗಿದೆ.

ಒಂಭತ್ತು ಮತ್ತು ಹತ್ತನೇ ನುಡಿಯಲ್ಲಿ ಬೆಳದಿಂಗಳು ನೀಡಿದ ತಣಿವು, ತೃಪ್ತಿಯ ಬಣ್ಣನೆಯಿದೆ. ಹಗಲಿನ ದಣಿವು, ರಾತ್ರಿಯ ಕತ್ತಲು ಬದುಕಿನ ಹೋರಾಟದ ಹಾಗೂ ಆತಂಕದ ಕಾಲಗಳು. ಆ ಹೋರಾಟ ಆತಂಕರಹಿತವಾದ ನೆಮ್ಮದಿಯ ಸವಿಗಾಲ ಬೆಳದಿಂಗಳು. ಅದು ಹಾಲಗಡಲಿನ ಸೀಮಿಯಾದುದರಿಂದ ಅಲ್ಲಿ ಸುಖದ ನೆಮ್ಮದಿಯ ಆಳನಿದ್ದೆಯಲ್ಲಿ ಸುಂದರ ಕನಸು ತೆರೆದುಕೊಂಡ ಹಾಗೆ ಮನದ ತೃಪ್ತಭಾವ ಹಾಡಾಗಿ

ಹೊಮ್ಮಿದೆ. 'ತೆರೆದದ ತಣವಿಕೀನಾsಡs' ಆ ತೃಪ್ತಿಯು ಜಗತ್ತು ಧವಳಗಂಗೆಯಲ್ಲಿ ಮುಳುಗಿ ಮೈಮನಸ್ಸು ಬೆಳಗಿದ ಸಮಾಧಿ ಸ್ಥಿತಿ, ಆನಂದದ ಉತ್ತುಂಗ ನೆಲೆ. ಅಂತಹ ಹದ ಇಡೀ ವಾತಾವರಣದಲ್ಲಿ ಮೈಗೂಡಿದಾಗ :

'ಮೋಡನೂ ಬೆಳ್ಳಗಾಗ್ಯಾವ
ತೆನೀ ಮಾಗ್ಯಾsವs
ಹಾಲುಣಿಸು ಎಲ್ಲಕೂ ಪಾsಡs

ಕೊನೆಯ ನುಡಿಯಲ್ಲಿ ಬೇಂದ್ರೆಯವರು ಅರೆಮರೆವು ಮಾಡುವ ಬಂಧ, ಛಂದದಿಂದ ಸವಿರಾಗ ಬೆರಸಿದ ಉಸಿರಿನಿಂದ ತಾನು ಸೃಷ್ಟಿಸುವ ಕಾವ್ಯವೂ ಬೆಳದಿಂಗಳಂತಹ ಮೋಡಿಕಾರ ಎಂದಿದ್ದಾರೆ. ಮೇಲಿನ ಹತ್ತು ನುಡಿಗಳಲ್ಲಿ ಬೇಂದ್ರೆಯವರ ಪ್ರತಿಸೃಷ್ಟಿಯು ನವನವೀನ ಪ್ರತಿಮೆಗಳಿಂದ ಕಂಗೊಳಿಸಿದೆ. ಕಲ್ಪನಾಲಹರಿಗೆ ಚಿಂತನೆಯ ಮೆರುಗು ನೀಡಿದೆ. ಅದು ರಸಿಕನ ಕಣ್ ಅರಳಿಸಿ, ಮನಸ್ಸನ್ನು ಮುದಗೊಳಿಸಿದೆ. ಜನಪದ ಭಾಷೆಯ ಜಾಡಿನಲ್ಲಿ ಸಾಗುತ್ತ ಶಿಷ್ಟಕಾವ್ಯದ ಅರ್ಥವನ್ನು ಹಿಗ್ಗಿಸಿದೆ. ಹೊಸದಾಟಿಯ ಲಯ, ಛಂದಸ್ಸನ್ನು ಸೃಷ್ಟಿಸಿದೆ. ಅದಕ್ಕೆ ಕವಿಯ ಉಸಿರ ಸವಿರಾಗ ಬೆರತಿದೆ. ಅದು 'ಅಂಬಿಕಾತನಯ'ನ ಹಾಡಾಗಿದೆ.

'ಅರೆಮರವು ಮಾಡುವೀಬಂಧ
ಯಾವುದೀ ಛಂದ

ಯಾವುದೀ ಧಾsಟಿs
ಯಾವುದೀ ಧಾಟಿ?॥
ಸವಿರಾಗ ಬೆರಸಿದs ಉಸಿರು
ಇದಕ ಯಾ ಹೆಸರು
ಇದಕ ಯಾ ಹೆಸsರs?

ಅಂಬಿಕಾತನಯನ ಹಾsಡs
ಬೆಳುದಿಂಗಳ ನೋಡs ॥'

## VI ನೀರೆ

'ನೀರೆ' ನಮ್ಮ ಭಾರತೀಯ ಕಲ್ಪನೆಯಲ್ಲಿ ಗಂಗೆ. ಪವಿತ್ರ ನೀರು. ಈ ಕವನದಲ್ಲಿ ಅದು ಸುರಿದು ಹರಿದು ಜೀವಿಗಳನ್ನು ಪಾವನಗೊಳಿಸುವ, ಸಮೃದ್ಧಿ ತರುವ; ಸುರಿಯದಿದ್ದಾಗ ಸೊರಗಿಸಿ ಸಂತಾಪವನ್ನುಂಟು ಮಾಡುವ ಚಿತ್ರಣವಿದೆ. ಇದು ಬೇಂದ್ರೆಯವರ ಪ್ರಾರಂಭದ ಕವಿತೆಗಳಿಗೆ ಮಾದರಿಯಾಗಿದೆ.

# ೬. ಪ್ರೇಮಗೀತೆಗಳು

ಜೀವನದ ಅನೇಕ ಆದರ್ಶಗಳಲ್ಲಿ ಪ್ರೇಮ ಮತ್ತು ಶ್ರೇಯ ಪ್ರಮುಖವಾದವುಗಳು. ಪ್ರಿಯವಾದ ವಸ್ತುಗಳಿಂದ, ವ್ಯಕ್ತಿಗಳಿಂದ, ಘಟನೆಗಳಿಂದ ದೊರಕುವ ಆನಂದ ಪ್ರೇಮದ ಫಲ ಶ್ರುತಿ. ಬ್ರಹ್ಮಜ್ಞಾನ ಪ್ರಾಪ್ತಿ ಶ್ರೇಯದ ಪರಮಗುರಿ. ಗಂಡು-ಹೆಣ್ಣು, ಪ್ರಿಯಕರ-ಪ್ರಿಯೆ; ನಾಯಕ-ನಾಯಕಿ ಒಂದೇ ಆಗಿದ್ದರೂ ಪರಿಸರದಿಂದ ಭಿನ್ನ. ನಿತ್ಯ ಜೀವನದಲ್ಲಿಯ ಗಂಡು-ಹೆಣ್ಣು ಪರಸ್ಪರರ ಗುಣಗಳನ್ನು ಮೆಚ್ಚಿ ಒಲಿದಾಗ ಪ್ರಿಯಕರ-ಪ್ರಿಯೆ, ನೀರ-ನೀರೆ ಆಗಿ ಪತಿ-ಪತ್ನಿ ಆಗಲೂ ಬಹುದು; ಪತಿ-ಪತ್ನಿ ಆಗದೇ ಪ್ರಿಯಕರ-ಪ್ರಿಯೆಯಾಗಿಯೂ ಉಳಿಯಬಹುದು ಕೃಷ್ಣ ರಾಧೆಯಂತೆ. ಇವರ ಜೀವನದಲ್ಲಿಯ ಆದರ್ಶವು ಅನುಕರಣೀಯವಾದಾಗ ಇವರೇ ನಾಯಕ-ನಾಯಕಿಯ ಪಾತ್ರವಹಿಸಲು ಸಮರ್ಥರಾಗುತ್ತಾರೆ.

ನಿಸರ್ಗದಲ್ಲಿ ಬ್ರಹ್ಮ, ವಿಷ್ಣು, ರುದ್ರ, ಇಂದ್ರ, ಅಗ್ನಿ, ವಾಯು, ಸೂರ್ಯ, ಚಂದ್ರ ವಿಭೂತಿಗಳಾಗಿ ಕಾರ್ಯಮಾಡುತ್ತಾರೆ. ಮಾನವರು ತಮ್ಮ ಜೀವನದಲ್ಲಿಯ ವಿಕೃತಕಾಮದ ಬೂದಿ ಮಾಡಿ; ಪ್ರೇಮದ, ಒಲುಮೆಯ ವಿಭೂತಿಯನ್ನು ಪಡೆಯಬೇಕಾಗಿದೆ. ಆಗ ಪ್ರೇಮ ಹಾಗೂ ಒಲುಮೆ ಕಿಚ್ಚಾಗಿ, ತಾಪಕೊಟ್ಟು, ತಪಮಾಡಲು ಹಚ್ಚಿ ಶ್ರೇಯ ಪ್ರಾಪ್ತಿಯತ್ತ ಹೊರಳುವಂತೆ ಮಾಡುತ್ತವೆ.

ಬೇಂದ್ರೆಯವರ ನಿಸರ್ಗ ಗೀತಗಳು ಮತ್ತು ಪ್ರೇಮಗೀತಗಳು ಬಿಂಬ-ಪ್ರತಿಬಿಂಬಗಳಾಗಿ; ಪ್ರಿಯಕರ ಮತ್ತು ಪ್ರೇಯಸಿತತ್ತ್ವದ ಮೌಲ್ಯವನ್ನು ತಿಳಿಸಿಕೊಡುತ್ತವೆ.

ಪ್ರೇಮದಲ್ಲಿ ಆಕಾಂಕ್ಷೆ ಮೊದಲ ಹೆಜ್ಜೆ. ಬಯಕೆ ಅದರ ಬೆಳವಣಿಗೆ. ಇವುಗಳ ಸಾತತ್ಯ ಕ್ಷಣಿಕವಾಗದೆ ಅನಂತದ ಸೀಮೆಗಳ ದರ್ಶನ ಮಾಡಿಸುತ್ತದೆ. ಬಯಸಿದ್ದು ಸಿಗದಾಗ ಅಗಲಿಕೆ, ವಿರಹದ ತಾಪವಾಗುತ್ತದೆ. ಒಲುಮೆಯ ಆದರ್ಶ ಇಟ್ಟುಕೊಂಡಾಗ ಸಾಮಾನ್ಯ ಜೀವನ ಅಧ್ಯಾತ್ಮ ಜೀವನದ ಪಥವನ್ನು ಅನುಸರಿಸುತ್ತದೆ. ಒಲವೆ ಬದುಕಾದಾಗ ಪ್ರೇಮರೂಪಿ ಪರಮಾತ್ಮನ ಸಾಕ್ಷಾತ್ಕಾರವಾಗುವ ಸಾಧ್ಯತೆ ಇರುತ್ತದೆ. ಬೇಂದ್ರೆಯವರ ಪ್ರೇಮಗೀತೆಗಳಲ್ಲಿ ಬಲಾತ್ಕಾರದ, ಶೋಷಣೆಯ ವಿಷಯ ಬರುವುದಿಲ್ಲ.

ಇವೆರಡೂ ವಿಕೃತರೂಪ. ಬೇಂದ್ರೆಯವರು ಪ್ರೇಮ ಮತ್ತು ಸಂಸ್ಕೃತಿಯ ಸಂದೇಶ ಸಾರುವವರಾಗಿದ್ದಾರೆ, ಆದುದರಿಂದ ಅವರಿಗೆ ಜೀವನದ ಪರಿಪಕ್ವತೆಯೆ ಅಂತಿಮ ಗುರಿಯಾಗಿದೆ. ಪರಿಪಕ್ವತೆಯ ಪ್ರಾಪ್ತಿ ಜೀವನಯೋಗದ ಸಿದ್ಧಿ.

ಪ್ರೀತಿ ಎಂಬುದು ಗಂಡು-ಹೆಣ್ಣಿನ ಯೌವನ ಸಹಜವಾದ ಬಯಕೆ. ಅದು ಪ್ರೇಮವಾಗುವುದು ಪ್ರಿಯಕರ-ಪ್ರೇಯಸಿಯು ಪ್ರೀತಿಯ ಸ್ವಾರ್ಥವನ್ನು ಮೀರಿ ಪ್ರೇಮಾರಾಧಕರಾದಾಗ. ಅಂತಹ ಪ್ರೇಮದಲ್ಲಿರುವ ಕಾಮಕ್ಕೆ ಶುದ್ಧತೆ ಆವರಿಸುತ್ತದೆ. ಈ ಬಗೆಯ ಶುದ್ಧ ಒಲವಿನ ಕವನಗಳು ಬೇಂದ್ರೆಯವರವು. ಪ್ರೇಯಸಿ ಎಂದರೆ ಪ್ರಿಯೆಯೂ ಹೌದು. ಅವರು ಪ್ರಿಯೆಯನ್ನು ಕುರಿತು ರಚಿಸಿರುವ ಕವನಗಳು ಕಾವ್ಯವಾಗಿವೆ. ಅವು ಪ್ರೇಮಾನುಭವವನ್ನುಂಟು ಮಾಡುತ್ತಾ ಆಹ್ಲಾದವನ್ನು ನೀಡಿ ಎಲ್ಲ ವಯೋಮಾನದ ಗಂಡು-ಹೆಣ್ಣನ್ನು ಒಲವಿನ ಸವಿ ಅನುಭವಿಸುವಂತೆ ಮಾಡುವ ಪ್ರೇಮಲಹರಿಗಳಾಗಿವೆ. ಬೇಂದ್ರೆಯವರು ರಚನಕಾರರಾದರೂ ಅವರು ಜಗದೆಲ್ಲ ರಸಿಕರಲ್ಲಿ ಒಬ್ಬರಾಗಿ ಆ ಪ್ರೇಯಸಿಯನ್ನು ನಿರ್ಮಲಾಂತಃಕರಣದಿಂದ ಆರಾಧಿಸುವ ಕಾರಣ ಅದು ದೇಶಕಾಲಾತೀತವಾದ ಸಾರ್ವಕಾಲಿಕ ಹಾಡಾಗಿ ಮಧುರ ಭಾವವನ್ನು ಹರಡುವ ಗುಣ ಹೊಂದಿದೆ. ಅವರ ಒಲುಮೆಯ ಕವನವನ್ನು ಕುರಿತು ಮಾಸ್ತಿ ವೆಂಕಟೇಶ ಅಯ್ಯಂಗಾರರು 'ಒಲುಮೆಯನ್ನು ಕುರಿತು ಗೀತಗಳಲ್ಲಿ ಬೇಂದ್ರೆಯವರು ತರುವ ರಸ ವಿಲಕ್ಷಣವಾದುದು.... ಇವರು ಜನದ ಬಾಳುವೆಯಲ್ಲಿ ಪ್ರೇಮ ಹರಿಯುವ ರೀತಿಯನ್ನು ಕಣ್ಣು ತೆರೆದು, ಮನಸ್ಸು ತೆರೆದು ನೋಡಿದ್ದಾರೆ. ಅದರಿಂದ ಇವರ ವಿವರಣದಲ್ಲಿ ಮಾತು ಮಾತು ನಿಜವನ್ನು ಹೇಳುತ್ತದೆ, ಮನಸ್ಸನ್ನು ಮುಟ್ಟುತ್ತದೆ. ಹೃದಯದಲ್ಲಿ ರಸದ ಊಟೆಯನ್ನು ಉಕ್ಕಿಸುತ್ತದೆ.'[೧] ಎಂದು ಹೇಳಿದ್ದಾರೆ.

## (ಅ) ದಾಪತ್ಯದ ಒಲವು

'ಒಲವೆ ನಮ್ಮ ಬದುಕು' ಎಂದು ಸಾರಿದ ಬೇಂದ್ರೆಯವರ ಕವನಗಳು ಪತಿ-ಪತ್ನಿಯರ ಸ್ನೇಹಸಂಬಂಧದ, ಪರಸ್ಪರರು ಅರಿತು ಬಾಳುವ, ಬದುಕಿನಲ್ಲಿ ನಗುತ್ತ ಬಾಳ್ವೆ ಮಾಡುವ, ಎದೆಹಿಗ್ಗಿಗಾಗಿ ಆಶಿಸುವ ಚಿಂತನೆಯನ್ನು ಹೊಂದಿವೆ. ಅವರು ದಾಂಪತ್ಯದ ಚೌಕಟ್ಟಿನಲ್ಲಿ ಪ್ರೀತಿಯನ್ನು ಅರಸುತ್ತ ಅದನ್ನು ಪ್ರೇಮ ಜ್ಯೋತಿ ಯನ್ನಾಗಿಸಿದ್ದಾರೆ. ಅವರು 'ಅಧರ್ಮಕಾಮವುಸಂಹಾರಿ, ಧರ್ಮ ಕಾಮವು ಆತ್ಮ ವಿಹಾರಿ. ಆತ್ಮವಿಹಾರಕ ಕಾಮವು ಭಕ್ತಿಬೀಜ'[೨] ಎಂದು ನುಡಿದಿದ್ದಾರೆ. ಬೇಂದ್ರೆಯವರ

೧. ಶ್ರೀನಿವಾಸ 'ಮುನ್ನುಡಿ'. ದ.ರಾ.ಬೇಂದ್ರೆ, ನಾದಲೀಲೆ, ಶ್ರೀ ಮಾತಾ ಪ್ರಕಾಶನ, ಧಾರವಾಡ, ೧೯೮೯, ಪು-೧೯

ಚಿಂತನೆಯು ಶ್ರೀಮಾತಾರವಿಂದರಿಂದ ಪುಷ್ಟಿಗೊಂಡಿದೆ. ಬೇಂದ್ರೆ ಯವರು ಮಗುವನ್ನು 'ಅರ್ಧನಾರಿ ನಟೇಶ್ವರ' ಎಂದು, ತನ್ನನ್ನು 'ಅರೆನಾರಿಯಾದವ'[೨] ಎಂದು ಕರೆದುಕೊಂಡು ಸ್ತ್ರೀಪುರುಷ ಸಮಾನತೆಯನ್ನು ಪ್ರತಿಪಾದಿಸಿದ್ದಾರೆ. ಈ ಚಿಂತನೆಯ ಮೂಲ ಶ್ರೀಮಾತಾ ಅವರಲ್ಲಿರುವುದು ಕಂಡುಬಂದಿದೆ. ಶ್ರೀಮಾತಾ ಅವರು "ಪುರುಷ ಹಾಗೂ ಸ್ತ್ರೀ ಎರಡೂ ಮೂಲವಸ್ತು ಎನ್ನುವುದಕ್ಕೆ ನನ್ನ ಆಕ್ಷೇಪವಿದೆ. ಅದು ನಿಜವಲ್ಲ ಎಂದೇ ಹೇಳುತ್ತಿರುತ್ತೇನೆ. ಒಂದು ಮೂಲವಸ್ತುವು ಹೀಗೂ ಹಾಗೂ ಇರುವುದು (ಶ್ರೀಮಾತಾ ತಮ್ಮ ಕೈಯನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ತಿರುಗಿಸುತ್ತಾರೆ) ಒಂದು ಕ್ರಿಯೆಯು ಹೀಗೆ ಮತ್ತು ಮತ್ತೊಂದು ಕ್ರಿಯೆ ಹಾಗೆ ಇರುವುದು. ಆದರೆ, ನೀವು ಒಂದು ವ್ಯಕ್ತಿಯು ಗಂಡಸು ಮತ್ತೊಂದು ಹೆಂಗಸೆಂದು ಅಷ್ಟೊಂದು ಹಟ ಹಿಡಿಯುವುದೇಕೆ? ಆ ರೀತಿಯಾಗಿಸುವುದಿಲ್ಲ. ಸ್ತ್ರೀ ಪುರುಷರೆನ್ನುವ ಭೇದಭಾವದ ದಂಧೆಯು ಪ್ರಕೃತಿಯ ತಂತ್ರವಾಗಿದೆ. ಇಲ್ಲಿಯ ರಚನೆಯು ಈ ರೀತಿಯಲ್ಲಿದೆ. ಆದ್ದರಿಂದ ಮೇಲಿನಿಂದ ಭೂಮಿಗಿಳಿಯುವಾಗ ಸ್ತ್ರೀ-ಪುರುಷ ಭೇದದ ಕಲ್ಪನೆಯೇ ಇರುವುದಿಲ್ಲ. ಆ ಕಲ್ಪನೆ ಅರ್ಥಹೀನ. ಆದರೆ ಭೂಮಿಗಿಳಿದು ಬಂದ ಮೇಲೆ ಅದು ನಿಜವಾಗುತ್ತದೆ. ಆಗ ನೀವೇ ಹೇಳಿಕೊಳ್ಳುತ್ತೀರಿ – "ಅದು ಯಥಾಯೋಗ್ಯವಾಗಿದೆ, ಪ್ರಕೃತಿಯು ಈ ರೀತಿ ರಚನೆ ಮಾಡಿದೆ" – ಅದು ಸರಿ. ಆದರೆ ಈ ಕಲ್ಪನೆಗಳು – ಒಂದು ಮೂಲವಸ್ತು ಮೆದುಳಿನಿಂದ ಬಂದಿದೆ. ಅದಕ್ಕೆ ಸ್ತ್ರೀ-ಪುರುಷ ಎಂಬುದಕ್ಕಿಂತ ಬೇರೆ ಕಲ್ಪನೆಯೇ ಬರುವುದಿಲ್ಲ. ಏಕೆಂದರೆ ಮನುಷ್ಯನಿನ್ನೂ ಪ್ರಾಣಿಯಾಗಿದ್ದಾನೆ ತಿಳಿಯಿತೆ?"[೪] ಎಂದು ಹೇಳಿದ್ದಾರೆ.

ಈ ಸ್ತ್ರೀ-ಪುರುಷರು ಗಂಡ-ಹೆಂಡತಿಯಾಗಿ ಬಾಳ್ವೆ ಮಾಡಲು ತೊಡಗಿದಾಗ ಈ ಸಮಾನ ತತ್ವವನ್ನು ಅರಿತಿರಬೇಕು ಎಂದು ಬೇಂದ್ರೆಯವರು ತಮ್ಮ ಕಾವ್ಯದಲ್ಲಿ ಸಾರಿದ್ದಾರೆ. ಅವರು ತನ್ನ ಪತ್ನಿಯನ್ನು ಜೀವನದ ಗೆಳತಿ, ಸಖಿ ಎಂದು ಕರೆದು ಸಖ್ಯ ಭಾವದ ಆರಾಧಕರಾಗಿದ್ದಾರೆ. ಅವರು ಹೆಂಡತಿಯನ್ನು 'ನೀಯೆನ್ನ ಹೆಂಡತಿಯೊ ಮೈಗೊಂಡ ನನ್ನಿಯೋ' ಎಂದು ಸತ್ಯ ಪ್ರೀತಿ, ಶಾಂತಿಯೇ ಹೆಂಡತಿ ಎಂದಿದ್ದಾರೆ.

---

೨. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಸಮಾಜಪುಸ್ತಕಾಲಯ, ಧಾರವಾಡ, ೧೯೭೪, ಪು. ೧೪೨.

೩. ದ.ರಾ.ಬೇಂದ್ರೆ, 'ಮತ್ತೆ ಶ್ರಾವಣಾಬಂತು', ಸಮಾಜ ಪುಸ್ತಕಾಲಯ, ಧಾರವಾಡ, ೧೯೭೩, ಪು. ೮೪.

೪. ಶ್ರೀ ಅರವಿಂದರು ಮತ್ತು ಶ್ರೀಮಾತೆ, ಸ್ತ್ರೀಶಕ್ತಿ (ಅನು) ಆರ್. ಜಿ. ಕುಲಕರ್ಣಿ, ಶ್ರೀ ದ.ರಾ.ಬೇಂದ್ರೆ ಸ್ನೇಹಮಂಡಲಿ, ಬೆಂಗಳೂರು, ೧೯೯೮, ಪು.೫೨.

# I ಗೆ

ಬೇಂದ್ರೆಯವರು 'ಗೆ' ಎಂಬ ಶೀರ್ಷಿಕೆಯಡಿಯಲ್ಲಿಯೇ ಹತ್ತು ಕವನಗಳನ್ನು ಬರೆದಿದ್ದಾರೆ. ಪ್ರಸ್ತುತ ಕವನ 'ಗೆ' ಯನ್ನು ಅವರ ಯೌವನ ಕಾಲದಲ್ಲಿ (೧೯೧೮) ರಚಿಸಿದ್ದಾರೆ. ಈ ಕವನದಲ್ಲಿ ಪ್ರಕೃತಿ ಸಹಜ ಆಕರ್ಷಣೆಗೆ ಒಳಗಾದ ಪುರುಷ ಸುಂದರ ಹೆಣ್ಣಿಗೆ ಆಶಿಸಿದ್ದಾನೆ. ಆ ಆಸೆ ಈ ನೆಲದ ಮಣ್ಣಿನ ಸಹಜಗುಣ.

ಆದರೆ ಅವನು ಮಾನವನಾಗಿ ಸಂಸ್ಕಾರಗೊಳ್ಳಬೇಕಾಗಿದೆ. ಸಂಸ್ಕೃತಿಯ ಪೋಷಕಭಾವದಲ್ಲಿ ಚಿಂತಿಸುವ ನೆಲೆಗೆ ಏರಬೇಕಾಗಿದೆ. ಕಾಮ ಮತ್ತು ಪ್ರೇಮದ ದ್ವಂದ್ವ ಮನವು, ಅಂತರ್ಯದ ಒಳದನಿಗೆ ಒಳಗಾಗಬೇಕಾಗಿದೆ ಎಂಬುದನ್ನು ಈ ಕವನ ಸಾರುತ್ತಿದೆ. ಇದೊಂದು ನಾಟ್ಯಗೀತವಾಗಿದೆ. ಕವನದ ಪ್ರಾರಂಭದಲ್ಲಿ ಕವಿಯು ಹೆಣ್ಣಿನ ರೂಪಕ್ಕೆ ಆಕರ್ಷಿತನಾಗಿ ಅದರ ಸೂಕ್ಷ್ಮಾತಿಸೂಕ್ಷ್ಮದ ವಿಶ್ಲೇಷಣೆಗೆ ಹೊರಟಂತಿದೆ. ಆತ ನುಡಿದಿದ್ದಾನೆ : 'ಆಕೃತಿಯನಡಗಿಸಿಹ ಆಕಾರವೇ! ಏಕಿ ಮಿಸುಗುಡದದಲಿಂತು ನಿಂತೆ?' ರಾಗಾದಿಗಳನ್ನು ಸೂಚಿಸುವ ಮನೋಭಾವ ಆಕಾರದಲ್ಲಿ ಹೊಮ್ಮಿಲ್ಲ. ಅದು ಅವನ ನೋಟಕ್ಕೆ ಸ್ಪಂದಿಸುತ್ತಿಲ್ಲ. ಆ ಹೆಣ್ಣಿನ ಸೌಂದರ್ಯ ತನ್ನ ಗುಣಲಕ್ಷಣದಂತೆ ಸಹಜವಾಗಿ ಹೊಳೆಯುತ್ತಿದೆ. ಅದು ಸಂಸ್ಕರಿಸದ ಮನದವನಾಗಿರುವ ಪ್ರಾಕೃತನಿಗೆ ತಿಳಿಯದಾಗಿದೆ.

ಆ ಪ್ರಾಕೃತನು ಪ್ರೇಮದೇವತೆಯೆಂದು ಭಾವಿಸಿ ಆಕೆಯ ಗುಡಿಯಿದ್ದೆಡೆಗೆ ಮೆಟ್ಟಿಲುಗಳನ್ನು ಏರಿ ಹೋಗುವಾಗ್ಗೆ ಅವನನ್ನು ಜಗ್ಗಿ ಎಳೆದದ್ದು ಕಾಮಕಲುಷಿತ ಪ್ರೇಮ. ಈ ಭಾವ ಪುರುಷನು ಪ್ರಕೃತಿಯಾದ ಹೆಣ್ಣಿನ ಸೌಂದರ್ಯರಾಧನೆಗೆ ತೊಡಗಲು ಪ್ರಯತ್ನಿಸಿದರೂ ಕಾಮ ವಿರಹಿತವಾಗಿ ದೃಷ್ಟಿಸಲಾಗದ ತೊಳಲಾಟವನ್ನು ಚಿತ್ರಿಸಿದೆ.

ಸೌಂದರ್ಯ ಒಲೆದಾಡಿ ಮಿಂಚುವುದು ಸಹಜ. ಅದನ್ನು ಕಂಡು ಆಕರ್ಷಿತನಾಗಿ ಮನದಲ್ಲಿ ಮಂಡಿಗೆ ತಿನ್ನುತ್ತ, ಅದು ಸಲ್ಲದು ಎಂಬ ಭಾವ ಪ್ರಾಕೃತನಿಗೆ ಉಂಟಾಗಿದೆ. ಆದರೂ ಅವನ ಒಳಮನದ 'ಕಾಮಕಲುಷಿತ ಪ್ರೇಮ' ಅವಳ 'ಮುದ್ದುಂಡ ದುಂಡು ಮೊಗ'ವನ್ನು ಕನವರಿಸಿ ಮುದ್ದಿಡ ಬಯಸಿದೆ.

'ಮುದ್ದುಂಡ ದುಂಡುಮೊಗ – ಮುದ್ದು ಮುದ್ದಿನ ಹೊಂಡ
ಮುದ್ದನು ಬೀರ್ರುವದಲ್ಲೇ!
ಮುದ್ದಿನಿಂ ಮುಂದುವರಿದಿಂದು ಮುದ್ದಿಡ ಬಂದೆ ಮುದ್ದೆನ್ನ–
ದೇಕೆಯೊಲ್ಲೆ?'

ಕವಿ ಮನಸ್ಸಿನ ಸಂಘರ್ಷದಲ್ಲಿ ತನ್ನ ಕಾಮದೃಷ್ಟಿಯ ಕಾಳಿಕೆಯನ್ನು ಕಳೆದುಕೊಂಡು 'ಗ'ಯನ್ನು ಪ್ರೇಮದೇವತೆಯಂತೆ ಕಾಣಲು ಆಶಿಸಿದ್ದಾನೆ. ಅವಳಲ್ಲಿ 'ಪ್ರೇಮ'ದ ಸತ್ವವಿರುವುದನ್ನು ತಿಳಿದು ಕಾಮುಕ ಕಾಮಿಯಾಗಿರದೆ ಪ್ರೇಮದ ರಾಮಣೀಯಕತೆಗೆ ರೂಪಾಂತರಗೊಂಡು ಸುಸಂಸ್ಕೃತನಾಗಿದ್ದಾನೆ. ತನ್ನನ್ನು ಶೋಧಿಸಿಕೊಳ್ಳುತ್ತಲೆ ಅವಳಲ್ಲಿಯ ಪ್ರೇಮದ ಸೌಂದರ್ಯಾರಾಧನೆಗೆ ಏರಿರುವುದು ಯುವಕವಿಯ ಮೇಲ್ಮುಖದ ಚಿಂತನೆಗೆ ಸಾಕ್ಷಿಯಾಗಿದೆ.

'ಕಾಮುಕನು ನಾನೆಂದು – ಪ್ರೇಮದೇವತೆ ನೀನು–
ಬೆಂಬದಿಗೆನಿಂತೆ – ಬಾಗಿ
ರಾಮಣೀಯಕರೂಪ ಮುಂಬದಿಗೆ ಬಂದಿರಲು
ಉಳಿಯುವೆನೆ ಕಾಮಿಯಾಗಿ?'

## II ನೀ ಹೀಂಗ ನೋಡಬ್ಯಾಡ ನನ್ನ

ಬೇಂದ್ರೆಯವರ ಅತ್ಯುತ್ತಮ ಭಾವಗೀತೆಗಳಲ್ಲಿ 'ನೀಹೀಂಗ ನೋಡಬ್ಯಾಡ ನನ್ನ' ಒಂದಾಗಿದೆ. ೧೯೨೪ರಲ್ಲಿ ಅವರ ಮಗಳು 'ಲಲಿತೆ' ತೀರಿ ಹೋದಾಗ ಬರೆದ ಕವನ ಇದಾಗಿದೆ. ಕವನದ ಭಾವಸಂದರ್ಭ ಹೀಗಿದೆ : 'ಅಪತ್ಯಗಳನ್ನು ಕಳೆದುಕೊಂಡ ಸತಿಯೊಬ್ಬಳು, ಆಸನ್ನ ಮರಣ ಶಿಶುವನ್ನು ನೋಡಲು ಬಂದ ಪತಿಯನ್ನು ಕುರಿತು ಅನಿರ್ವಚನೀಯ ದುಃಖದಿಂದ ಅರ್ಥಪೂರ್ಣವಾಗಿ ನೋಡಿದಾಗ, ಅವನ ಎದೆಯಲ್ಲಿ ಹುಟ್ಟಿದ ಹಾಡು.' ಇದು ಕವಿಯ ಎದೆಯಲ್ಲಿ ಹುಟ್ಟಿದ ಹಾಡಾಗಿ ಸಹೃದಯರ ಹೃದಯವನ್ನು ತಲುಪಿ ಕರುಣರಸವನ್ನು ಪ್ರವಹಿಸುತ್ತಿದೆ. ಜಾನಪದ ಬದುಕು, ಭಾಷೆ, ಗ್ರಾಮ್ಯ ಪರಿಸರ, ನೆಲದ ಸಂಸ್ಕೃತಿಯ ಸಾರ ಹೀರಿಕೊಂಡ ಶಿಷ್ಟ ಕಾವ್ಯದ ಸೊಬಗಿಗೆ ಈ ಕವನ ಮಾದರಿಯಾಗಿದೆ. ಬೇಂದ್ರೆ ಜನಪದ ಕವಿಯಲ್ಲ. ಜಾನಪದವನ್ನು ಶಿಷ್ಟಕ್ಕೆ ಸಂಯೋಗಗೊಳಿಸಿದ ಪರಿಣತ ಕವಿ.

ಈ ಕವನ ಒಟ್ಟು ಐದು ನುಡಿಗಳನ್ನು ಹೊಂದಿದೆ. ಪಲ್ಲವಿಯು ಕವಿಯದೃಷ್ಟಿ ಮಗುವನ್ನು ಕಳೆದುಕೊಂಡ ಹೆಂಡತಿಯ ನೋಟವನ್ನು ಎದುರಿಸಲಾಗದ ಸೋಲಿನಲ್ಲಿಯೇ ಅವನ ಆತ್ಮವಿಮರ್ಶೆಯನ್ನು ಸೂಚಿಸಿದೆ.

'ನೀ ಹೀಂಗ ನೋಡಬ್ಯಾಡನನ್ನ
ನೀ ಹೀಂಗ ನೋಡಿದರ ನನ್ನ, ತಿರುಗಿ ನಾ ಹ್ಯಾಂಗ ನೋಡಲೇ ನಿನ್ನ'॥

ಆ ಮಗುವಿನ ಹೆಸರು 'ಲಲಿತೆ'ಯಾಗಿದ್ದು ಅದನ್ನು ಕುರಿತು 'ಸಖೀಗೀತ'ದಲ್ಲಿ ಹೀಗೆ ನುಡಿದಿದ್ದಾರೆ :

'ಲಲಿತ ಎಂದರೆ ನಾಲಿಗೆ ಈಗಲು
ರಸ ಒಸರುತ ಹಿಗ್ಗ ಬೀರುವದು
ಈ ಕೂಸ ಕಳಕೊಂಡು, ನೀನೆಂತೊ ಉಳಕೊಂಡು
ಲಾಲಿತ್ಯವಿಲ್ಲದ ಶೈಲಿಯೊಲು.'

ಬೇಂದ್ರೆಯವರು 'ನಾದಲೀಲೆ' ಕವನ ಸಂಕಲದ ಪ್ರಾರಂಭದ ಪೀಠಿಕಾ ಪದ್ಯದಲ್ಲಿ ಹೀಗೆ ಪ್ರಾರ್ಥಿಸಿದ್ದಾರೆ :

'ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ
ನೀಡುವೆನು ರಸಿಕ! ನಿನಗೆ!
ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಆ ಸವಿಯ ಹಣಿಸು ನನಗೆ'!

ಅವರು ತಮ್ಮ ತೊಂದರೆ, ನೋವಿನ ಅನುಭವದ ಕವನಗಳನ್ನು ಲೋಕದ ಹಾಡಿನಂತೆ ನಿರ್ಲಿಪ್ತತೆಯಿಂದ ಹಾಡಿರುವುದು ಆಶ್ಚರ್ಯವಾಗಿದೆ. ಅದೇ ನಿರ್ಲಿಪ್ತತೆ ಅವರ ನೋವನ್ನು ಮರೆಸಿ ನಂಜುಂಡನಾಗುವಂತೆ ಮಾಡಿದೆ.

ಈ ಕವನದ ಮೊದಲ ನುಡಿಯಲ್ಲಿ ಕವಿಯು ಬದುಕಿನ ಸಂಸಾರ ಸಾಗರದಲ್ಲಿ ಬಾಳದೋಣಿ ಸಾಗುವಾಗ ಕಾಣದ ಬಂಡೆಗಳಿಗೆ ತಗುಲಿ ಆಘಾತಗಳಾಗುತ್ತಿರುತ್ತದೆ ಎಂದು ಹೇಳಿದ್ದಾನೆ. ಅಂತಹ ಮಗು ಸತ್ತ ಆಘಾತದ ದುಃಖದ ಬಂಡಿಯನ್ನು ಎದುರಿಸಿ ಮುಂದೆ ಸಾಗಬೇಕಾಗಿದೆ. ಆ ಅರಿವು ತನಗಿದೆ ಎಂದು ಹೆಂಡತಿಗೆ ತಿಳಿಸಿದ್ದಾನೆ. ದಾಂಪತ್ಯ ರಥವನ್ನು ಯೋಗ್ಯವಾಗಿ ನಡೆಸಲಾಗದೆ ಮುಗ್ಗುರಿಸಿದಾಗ ಉಂಟಾದ ಭಯ, ತಲ್ಲಣದಲ್ಲಿ ದೇವರ ದಯೆಯಿಂದ ಸಾವರಿಸಿಕೊಂಡು ಎದ್ದು ನಿಲ್ಲುವ ಭರವಸೆಯಿಂದ ನುಡಿದಿದ್ದಾನೆ :

'ಮಲಗಿರುವ ಕೂಸು ಮಲಗಿರಲಿ ಅಲ್ಲಿ, ಮುಂದಿನದು ದೇವರ ಚಿತ್ತ
ನಾ ತಡೀಲಾರೆ ಅದು, ಯಾಕ ನೋಡತೀ ಮತ್ತ ಮತ್ತ ನೀ ಇತ್ತ.'

ಎರಡು, ಮೂರು ಮತ್ತು ನಾಲ್ಕನೇ ನುಡಿಗಳಲ್ಲಿ ಅವಳ ಸೌಂದರ್ಯವನ್ನು, ಸುಂದರ ಕನಸುಗಳನ್ನು ಭಗ್ನಗೊಳಿಸಿದ ಪುರುಷನ ಕ್ರೌರ್ಯ ತನ್ನದಾದರೂ, ಅವಳು ಇನ್ನೂ ತನ್ನ ಬಗ್ಗೆ ಪ್ರೀತಿ ಹೊಂದಿರುವುದಕ್ಕೆ ಕವಿ ಮೆಚ್ಚಿದ್ದಾನೆ. ಅದೇ ವೇಳೆಯಲ್ಲಿ ತನ್ನ ಅಸಹಾಯಕ, ಅಪ್ರಯೋಜಕತೆಗೆ ನೊಂದಿದ್ದಾನೆ. ಆತ್ಮ ವಿಮರ್ಶಕನಾಗಿ ತನ್ನ ಬಾಳಿನ ಕತ್ತಲೆಗೆ ತಾನೇ ಕಾರಣನೆಂದು ಮರುಗಿದ್ದಾನೆ.

ಉಪಮಾಲಂಕಾರದಲ್ಲಿ ಅವಳ ಸೌಂದರ್ಯವನ್ನು ಬಣ್ಣಿಸುತ್ತಾ, ಮಸುಕಿ ಹೋದ ಪ್ರತಿಮೆಗಳಲ್ಲಿ ಅದಕ್ಕೆ ಕಾರಣನಾದ ತನ್ನನ್ನು ನಿಲ್ಲಿಸಿಕೊಂಡಿರುವ ಬಗೆಯು ಬದುಕಿನ ಸಂಸಾರದ ಸಂಘರ್ಷಕ್ಕೆ ಹಿಡಿದ ಕನ್ನಡಿಯಾಗಿದೆ. ಅವಳಮುದ್ದು ತುಟಿಯೆಂಬುವುದು ತಾಂಬೂಲ ಹಾಕದೆಯೂ ಗಿಣಿಕಡಿದ ಹಣ್ಣಿನಂತೆ ಸವಿಯಾಗಿತ್ತು. ಅದು ತನ್ನ ಬಣ್ಣ ಕಳೆದುಕೊಂಡು ಅವಳು ಲಾಲಿತ್ಯರಹಿತವಾಗಿರುವುದು 'ಸಾವನಽ ತನ್ನ ಕೈಸವರಿತಿಲ್ಲಿ, ಬಂತೆನಗ ಇಲ್ಲದ ಭೀತಿ' ಎಂದು ಅವನಿಗೆ ಭಯವನ್ನುಂಟು ಮಾಡಿದೆ.

ಕವಿ ಆತ್ಮಶೋಧಕ್ಕೆ ತೊಡಗಿ ತಾನು ಬೂದಿ ಮುಚ್ಚಿದ ಕೆಂಡವೆಂದು ಅವಳ ಮಧುರತೆಯನ್ನು ಸುಟ್ಟು ಹಾಕಿದುದಕ್ಕೆ ನೊಂದಿದ್ದಾನೆ. ಧಾರವಾಡದ ನುಡಿ ತನ್ನ ಎಲ್ಲ ವೈಭವದೊಡನೆ ಈ ಹಾಡಿನಲ್ಲಿ ವಿಜೃಂಭಿಸಿ ಕವಿಯ ನೋವನ್ನು, ಅಸಹಾಯಕತೆಯನ್ನು ಅನಾವರಣಗೊಳಿಸಿದೆ. ಕವಿ ಹೆಂಡತಿಗೆ ಒಂದುಗಾದೆ ಮಾತನ್ನು ನೆನಪಿಸಿ ತಾನು ದೇವರೆಂದು ತಿಳಿದದ್ದು ನಿನ್ನ ತಪ್ಪು. ನಾನು ಮುಗಿಲು ಎಲ್ಲವನ್ನೂ ಕೊಡಬಲ್ಲವನು ಎಂದು ನೀನು ತಿಳಿದಿದ್ದೆ. ಆ ಮುಗಿಲೇ ನೆಲದ ಮೇಲೆ ಬಿದ್ದಾಗ ನೆಲಕ್ಕೆ ಆಧಾರ ಇನ್ನೆಲ್ಲಿ ಎಂದು ತೀವ್ರ ಆತ್ಮಶೋಧವನ್ನು ಕಾವ್ಯವಾಗಿಸಿದ್ದಾರೆ.

'ಧಾರೀಲೆ ನೆನೆದ ಕೈಹಿಡಿದೆ ನೀನು, ತಣ್ಣಽಗ ಅಂತನ ತಿಳಿದು
ಬಿಡವಲ್ಲಿ ಇನ್ನುನೂ, ಬೂದಿಮುಚ್ಚಿದ ಕೆಂಡ ಇದಂತ ಹೊಳೆದು
ಮುಗಿಲಽನ ಕಪ್ಪರಿಸಿ ನೆಲಕ ಬಿದ್ದರ ನೆಲಕ ನೆಲಿ ಎಲ್ಲಿನ್ನಽ?
ಈ ಗಾದಿಮಾತು ನಂಬಿ ನಾನು ದೇವರಂತ ತಿಳಿದಿಯೇನ ನೀ ನನ್ನ?'

ಅವಳ ರೂಪಲಾವಣ್ಯವನ್ನು ಎಷ್ಟು ನೆನೆದರೂ ಕವಿಗೆ ಸಾಕಾಗುತ್ತಿಲ್ಲ. ಅಂತಹ ತುಂಬು ಯೌವನದ ಉಲ್ಲಾಸ, ಉತ್ಸಾಹ ತನ್ನಿಂದ ಮಸುಗಿ ಹೋಯಿತಲ್ಲ ಎಂದು ನೊಂದಿದ್ದಾನೆ. ಹಾಗಾಗಿ ಅದನ್ನು ನೆನೆಯುತ್ತ ಅವಳ ಹೊಳೆವ ಕಣ್ಣನ್ನು ರೂಪಕಾತ್ಮಕವಾಗಿ 'ಇಬ್ಬನಿ ತೊಳೆದರೂ ಹಾಲು ಮೆತ್ತಿದಾ ಕವಳಿಕಂಟಿಯಾ ಹಣ್ಣು' ಎಂದು ಕರೆದಿದ್ದಾನೆ. ಆ ಕಣ್ಣಿನ ಹಿಂದಿನ ಹೊಳಪು ಏನಾಯಿತು ಎಂದು ಪ್ರಶ್ನಿಸಿಕೊಂಡು; ಅದು ಕಳೆದುದಕ್ಕೆ ದಿಗಿಲುಗೊಂಡು ರೂಪಕಾತ್ಮಕವಾಗಿ ನುಡಿದಿದ್ದಾನೆ :

'ದಿಗಿಲಾಗಿ ಅನ್ನತದ ಜೀವ ನಿನ್ನ ಕಣ್ಣಾರೆ ಕಂಡು ಒಮ್ಮಿಗಿಲ
ಹುಣ್ಣಿವೀ ಚಂದಿರನ ಹೆಣಾ ಬಂತೊ ಮುಗಿಲಾಗ ತೇಲತ ಹಗಲ!'

ತನ್ನ ಪತ್ನಿಯ ರಾತ್ರಿಯ ಹೊಳಪಿನ ಹುಣ್ಣಿಮೆ ಚಂದ್ರನಂತಹ ಮುಖ ತನ್ನ ಕಣ್ಣಿ ಕದಿರನ್ನು ಕಳೆದುಕೊಂಡು ತೇಜೋಹೀನವಾಗಿರುವುದನ್ನು 'ಹಗಲಹೊತ್ತಿನ ಚಂದ್ರ'ನೆಂದು ಹೇಳಿ ಅದರ ನಿಸ್ತೇಜತೆಯನ್ನು ಅನನ್ಯವಾಗಿ ಕಾವ್ಯವಾಗಿಸಿದ್ದಾರೆ.

ಆ ಪತ್ನಿಯು ತನ್ನ ಮಗುವಿನ ಸಾವಿಗೆ, ತನ್ನ ಲಾಲಿತ್ಯರಹಿತ ಜೀವಕ್ಕೆ ಪತಿಯೆ ಕಾರಣನೆಂದು ತಿಳಿದೂ ಅವನನ್ನು ಸಮಾಧಾನ ಗೊಳಿಸಲೆಂಬಂತೆ ನಕ್ಕಿದ್ದಾಳೆ. ಹಾಗೆ ನಗಬೇಡ, ಅದು ಮಳೆಸುರಿವ ಮೋಡವನ್ನು ತಡೆವ ಗಾಳಿ ಎಂದಿದ್ದಾನೆ. ಅವಳನ್ನು ದುಃಖ ದುಮ್ಮಾನ ಒಳಗೆ ಒತ್ತಿಹಿಡಿಯದೆ ಅಳು ಎಂದಿದ್ದಾನೆ. ಸಾವು ಮತ್ತು ನೋವಿನ ವಿಪರೀತ ಒತ್ತಡ ಮಡುಗಟ್ಟದೆ ದುಃಖದಲ್ಲಿ ಹೊರಹೊಮ್ಮಬೇಕು. ಇಲ್ಲದಿದ್ದರೆ ಅದು ಎದೆಯ ಬಡಿತವನ್ನೇ ನಿಲ್ಲಿಸುತ್ತದೆ. ಹಾಗಾಗಿ ಕವಿ ಹೆಂಡತಿಯನ್ನು ಅಳು ಎಂದು ಒತ್ತಾಯಿಸಿದ್ದಾನೆ.

ನಿನ್ನ ಕಣ್ಣಿನ್ಯಾಗ ಕಾಲೂರಿಮಳೆಯು, ನಡ ನಡಕ ಹುಚ್ಚನಗಿ ಯಾಕ?
ಹನಿ ಒಡೆಯಲಿಕ್ಕೆ ಬಂದಂಥ ಮೋಡ ತಡಧಾಂಗ ಗಾಳಿಯ ನೆವಕ.
ಅತ್ತಾರೆ ಅತ್ತು ಬಿಡು, ಹೊನಲು ಬರಲಿ, ನಕ್ಕ್ಯಾಕ ಮರಸತೀ ದುಕ್ಕ?
ಎದೆ ಬಡಿಸಿ ಕೆಡವು, ಬಿರಿಗಣ್ಣು ಬ್ಯಾಡ, ತುಟಿಕಚ್ಚಿ ಹಿಡಿಯದಿರು ಬಿಕ್ಕ.

## III ನಾದಲೀಲೆ

ಬೇಂದ್ರೆಯವರು 'ನಾದಲೀಲೆ' ಕವನವನ್ನು ನಜರಬಂಧಿ ಶಿಕ್ಷೆಯಲ್ಲಿದ್ದಾಗ ಮುಗದ ಗ್ರಾಮದಲ್ಲಿ ರಚಿಸಿದ್ದಾರೆ. ಈ ಕವನವು ಜೀವಿಗೆ ಅತಿ ಸಹಜವಾಗಿ ಎದುರಾಗುವ ಕತ್ತಲು–ಬೆಳಕು, ಹುಟ್ಟು–ಸಾವು, ಸುಖ–ದುಃಖಗಳ ದ್ವಂದ್ವ–ಸಂಘರ್ಷವನ್ನು ಮುಖಾ ಮುಖಿಯಾಗಿಸಿದೆ. ಆ ವೈರುಧ್ಯಗಳ ಅರಿವಿನಲ್ಲಿಯೇ ಅವುಗಳನ್ನು ಗೆಲ್ಲುವ ಜೀವನೋತ್ಸಾಹವನ್ನು ಕೋಲಾಟದ ನಾದ, ಲಯದಲ್ಲಿ ತಿಳಿಸಿದೆ. ಈ ಕವನದ ಪ್ರಾರಂಭ ಮೂರು, ಮೂರು ಮಾತ್ರೆಗಳ ಕೋಲಾಟದ ಆರಂಭಲಯದಲ್ಲಿದೆ. 'ಕೋಲುಸಖೀ, ಚಂದ್ರಮುಖೀ, ಕೋಲೆ ನಾದಲೀಲೆ' ಎಂಬ ಪಲ್ಲವಿಯೊಡನೆ ಕೋಲಿನ ಬಡಿತಸಾಗಿ ಮೃದುಭಾವದ 'ಮುಂಜಾವದ ಎಲರಮೂಸಿ ನೋಡುಶಿಹವೆ ನಲ್ಲೆ । ತರಳೆ ಎರಳೆ, ಚಿಗುರ ಚಿಗುರೆ, ಹೂವು ಹೂವು ಹುಲ್ಲೆ' ಎಂದು ನಿಧಾನಗತಿಯಲ್ಲಿ ಸಾಗಿದೆ. ಇಲ್ಲಿ ಕವಿ ಸಖಿಯ ಮುಗ್ಧ ಮಧುರ ಭಾವವನ್ನು ಹುಲ್ಲೆಗೆ ಹೋಲಿಸಿ ಅದರ ನಯ ನಡಿಗೆಗೆ ಕೋಲಿನ ಬಡಿತವನ್ನು ಮೇಳೈಸಿದ್ದಾರೆ.

ಜನಪದರ ಕೋಲಾಟದಲ್ಲಿ ಭಾವಕ್ಕೆ ತಕ್ಕಂತೆ ಕೋಲಿನ ಬಡಿತ ಬದಲಾಗುತ್ತದೆ. ಹೀಗಾಗಿ ಮುಂದಿನ ಸಾಲುಗಳು ಮಧುರ ಪ್ರಕೃತಿಯಲ್ಲಿಯೇ ಇರುವ ರೌದ್ರದ ಮುಖಕ್ಕೆ ವಾಣಿಯಾಗಿರುವಂತೆ ಆರು, ಆರು ಮಾತ್ರೆಗಳ ತೀವ್ರ ಲಹರಿಯಲ್ಲಿದೆ.

'ಕಂಗೊಳಿಸುವ ಕೆಂಪು ಮುಂದೆ, ಕಂಗೆಡಿಸುವ ಮಂಜುಹಿಂದೆ।
ಅತ್ತಣಿಂದ ಬೇಟಗಾರ ಬರುವ ನಾನು ಬಲ್ಲೆ
ಮುಂಜಾವದ ಎಲರ ಮೂಸಿ ನೋಡುತಿಹವೆ ನಲ್ಲೆ'

ಈ ಕವನವು ಕೋಲಾಟದ ಹಾಡಿನ ಲಯದಲ್ಲಿ ಸಾಗುತ್ತಲೆ ವೈಚಾರಿಕತೆಯ ಹರಹನ್ನು ಪಡೆದು ಜೀವನದ ಅರ್ಥವನ್ನು ಗಂಭೀರವಾಗಿ ಶೋಧಿಸಿದೆ. ಹೀಗೆ ಸೌಮ್ಯ, ರೌದ್ರ ಭಾವಗಳ ಮಿಳಿತವಾಗಿ ಸಾಗುವ ಕೋಲಾಟದಂತೆ ಜೀವಿಯ ಬದುಕಿರುವುದನ್ನು ಕಾವ್ಯದ ಛಂದಸ್ಸು ಒಳಗೊಂಡಿದೆ. ಅದು ತನ್ನ ಭಾವಕ್ಕೆ ತಕ್ಕಂತೆ ಛಂದಶ್ಶರೀರವನ್ನು ಹೊಂದಿ ಕೋಲಿನ ಲಯವನ್ನು ದುಡಿಸಿಕೊಂಡಿದೆ.

ಪ್ರಕೃತಿ ನಿಗೂಢವಾಗಿರುವಂತೆ ಮಾನವನ ಬದುಕು ನಿಗೂಢವಾಗಿದೆ. ಆ ನಿಗೂಢವನ್ನು ಅನುಭವವಾಗಿಸುವಲ್ಲಿ ಬೇಂದ್ರೆಯವರು ನಿಸರ್ಗದ ಪ್ರತಿಮೆಗಳನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಆ 'ಚಂದ್ರಮುಖಿ'ಯು ಕಾವ್ಯ ಪರಂಪರೆಯಲ್ಲಿ ಸದಾ ಬಳಕೆಯಾಗಿ ಹೋಗಿರುವ ಕವಿಸಮಯದ ಚಂದ್ರಮುಖಿಯಲ್ಲ. ಇವಳು 'ನಾದಲೀಲೆ'ಯ ಪ್ರತೀಕವಾದ 'ಚಂದ್ರಮುಖಿ.' ಇಲ್ಲಿಯ 'ಚಂದ್ರಮುಖಿ' ಕವಿಯ ಜೊತೆ ಕೋಲು ಹಾಕಿ ಕುಣಿವವಳಂತೆ ದ್ವಂದ್ವ ವೈರುಧ್ಯಗಳ ನಡುವೆ ನೆಲಸಿ ಆಹ್ಲಾದಕ್ಕೆ ಆಶಿಸುವವಳು. ನೆಲದ ಸಖಸಖಿಯರಿಗೆ 'ಕಂಗೊಳಿಸುವ ಕೆಂಪು ಮುಂದೆ, ಕಂಗೆಡಿಸುವ ಮಂಜುಹಿಂದೆ' ಇದ್ದು, ದಿನನಿತ್ಯದ ಕಷ್ಟ ಸುಖವು ಅಮಾವಾಸ್ಯೆ, ಪೌರ್ಣಮಿಗಳ ಮಧ್ಯೆ ಚಂದ್ರಕುಂದಿ ವಿಕಾಸಗೊಳ್ಳುವಂತಹದು. 'ಚಂದ್ರಮುಖಿ' ಬೆಳೆದು ಕಂಗೊಳಿಸುವಲ್ಲಿ ಅವಳ ಕಷ್ಟ ಸಹಿಷ್ಣು ಗುಣವೂ, ಬೆಳೆವ ಮನಸ್ಸು, ಚೈತನ್ಯಶೀಲತೆಯೂ ಇದೆ. ಈ 'ಚಂದ್ರಮುಖಿ' 'ನಾದಲೀಲೆ'ಯಲ್ಲಿ ಸಮರಸ ತತ್ತ್ವದ ಸಂಕೇತವಾಗಿದ್ದಾಳೆ.

ಬೇಂದ್ರೆಯವರು ವಿರುದ್ಧ ಭಾವದ ನಾದಲಹರಿಯ ಪ್ರಕೃತಿಯಲ್ಲಿ ಬೆಳೆವ ಜೀವಸಂಕುಲವನ್ನು ಚಿತ್ರಿಸಿದ್ದಾರೆ. ಅದರ ಭಾಗವಾದ ಸಖಸಖಿಯರು ಆ ಅನುಭವಗಳ ಒಡಲಿನಲ್ಲಿಯೇ ಪ್ರೇಮ ಮುಖಿಗಳಾಗುವುದನ್ನು ಸಾಧ್ಯವಾಗಿಸಿದ್ದಾರೆ. ಮೊದಲ ನುಡಿಯಲ್ಲಿ ಮುಗ್ಧ ಸುಂದರ ಚೇತೋಹಾರಿಯಾದ ಎಲ್ಲರನ್ನು ಮೂಸಿ ಪ್ರಕೃತಿಯನ್ನು ಸ್ವೀಕರಿಸುವ ಜಿಂಕೆಯ ಹಿಂಡಿನ ಚಿತ್ರವಿದೆ. ಅದನ್ನು ಬಣ್ಣಿಸುವ ನುಡಿಯಲ್ಲೆ ಅದರ ಚಂಚಲತೆ, ಚಿಗುರು ಭಾವ, ಬಣ್ಣ, ಹೂವಿನಂತಹ ಸುಂದರ ಮೈಯು ನಿರುಪದ್ರವಿಗುಣವಿದೆ. 'ತರಳ ಎರಳೆ, ಚಿಗುರ ಚಿಗುರೆ, ಹೂವು ಹೂವು ಹುಲ್ಲೆ'. ಆ ಮುಂಜಾವು ಮತ್ತು ತರಳ ಎರಳೆ ಭಾವ ಲಯಾನ್ವಿತವಾಗಿ ಕೂಡಿ ಅತಿಮಧುರ ಭಾವವನ್ನು ಹೊಮ್ಮಿಸಿವೆ. ಅಂತಹ ಹುಲ್ಲೆಯನ್ನು ಆಸೆಯೊಡನೆ ಆವರಿಸಿರುವುದು ಆತಂಕ, ಭಯ. 'ಕಂಗೊಳಿಸುವ ಕೆಂಪು ಮುಂದೆ, ಕಂಗೆಡಿಸುವ ಮಂಜುಹಿಂದೆ.' ಅದನ್ನು ಕಂಡ ಕವಿ ನುಡಿದಿದ್ದಾನೆ. 'ಅತ್ತಣಿಂದ ಬೇಟೆಗಾರ ಬರುವ ನಾನುಬಲ್ಲೆ' ಆ

ಮಧುರ ಮುಗ್ಧ ನಿಸರ್ಗವನ್ನು ಕೊಲ್ಲುವ ಬೇಟೆಗಾರ ಬರುತ್ತಿದ್ದಾನೆ. ಅವನು ಬೇಟೆಯಾಡುವವನು; ಉತ್ತಮವನ್ನು ಕಬಳಿಸಲು ಹೊಂಚು ಹಾಕುವವನು. ಅವನು ಕಾಲನೂ ಹೌದು.

ಸಖಿ 'ಚಂದ್ರಮುಖಿ' ಕವಿಯೊಡನೆ ಕೋಲು ಹಾಕುತ್ತ ಅವನೊಡನೆ ರಿಂಗಣ ಕುಣಿಯುತ್ತಾ ಅವನ ನುಡಿಯನ್ನು ಆಲಿಸುತ್ತಾಳೆ. ಆ ಕಾಡ ಹುಲ್ಲೆಯಂತೆ ತನ್ನ ಪರಿಸರದಲ್ಲಿ 'ಕರೆವ ಕರುವು, ಕುಣಿವ ಮಣಕ, ತೊರೆವ ಗೋ ಗಭೀರೆ' ಇವೆ. ಅವುಗಳನ್ನು ಅದೇ ದ್ವಂದ್ವ ಪ್ರಕೃತಿ ಆವರಿಸಿದೆ, ಬೇಟೆಗಾರ ಹೊಂಚು ಹಾಕುತ್ತಲೇ ಇದ್ದಾನೆ. ಆ ಬೆಳೆದು ತುಂಬಿ ಬಂದ 'ತೊರೆವ ಗೋಗಭೀರೆ'ಯನ್ನು ಕಂಡಾಗ ಅದನ್ನು ಬೇಟೆಗಾರನೆಂಬ ಕಾಳ ಕಬಳಿಸುವನೆಂಬ ಭಯವಿದೆ. ಅದನ್ನು ಎದುರಿಸುವ ಚೈತನ್ಯಶಕ್ತಿ ಆ ಪ್ರಕೃತಿಯಲ್ಲಿಯೇ ಇದೆ ಎಂಬ ಭರವಸೆಯ ನುಡಿ : 'ಕಾಣೆಕೊಳಲಿನವನ ಎನುವೆ, ಎಲ್ಲು ಇಹನು ಬಾರೆ'.

ಪ್ರಕೃತಿಯ ನಾದಾನುಭವವೇ ಸೌಂದರ್ಯಾನುಭವ. ಅದೇ ದೈವದ ನೆಲೆ. ಕೊಳಲಿನವನು ಕಾಣದ ದೂರದವನಲ್ಲ. ಕಾಣುವ ಆತ್ಮಾನುಸಂಧಾನ. 'ಇಲ್ಲೆ ಇಹನು' ಎಂಬ ಸತ್ಯ. ಇದು ಬೇಂದ್ರೆಯವರು ಪ್ರೇಮಗೀತೆಗಳ ನೆಲೆಯಲ್ಲೆ ತಾತ್ವಿಕ ಚಿಂತನೆಗೆ ಸಾಗುವರೀತಿ. ಸೃಜನಶೀಲ ಶಕ್ತಿಯ ಪ್ರೇರಣಾಧಾತು ಈ ನೆಲ ಮತ್ತು ಬಾನಿನಲ್ಲಿದೆ. ಕತ್ತಲು–ಬೆಳಕು, ಹಿಗ್ಗು–ಕುಗ್ಗು, ನೋವು–ನಲಿವು, ಹಿರಿದು – ಕಿರಿದುಗಳಲ್ಲಿ ಕಷ್ಟಸಹಿಷ್ಣುವಾಗಿ ಅರಳುವ ಜೀವಸತ್ವ ಅದಾಗಿದೆ. ಬೇಂದ್ರೆಯವರು ಅದರ ಸೆಲೆಯನ್ನು ಕಾವ್ಯದಲ್ಲಿ ನಾದಮಯವಾಗಿ ನೂತು ಆನಂದ ತತ್ವದ ನೆಲೆಗೆ ಕೊಂಡೊಯ್ದಿದ್ದಾರೆ. ಅದನ್ನು ಭಾರತೀಯ ತತ್ವದ ನಾದೋಪಾಸನೆಯ ಕೇಂದ್ರ ದೈವ ಶ್ರೀಕೃಷ್ಣನೊಡನೆ ಐಕ್ಯಗೊಳಿಸಿದ್ದಾರೆ.

ಮೂರನೇ ನುಡಿಯಲ್ಲಿ ಅಚಿಂತ್ಯದ ನಂಬಿಕೆಯ ಭಾವ ಮೂಡಿಸಿ, ಬೇಂದ್ರೆಯವರು ಕಾಲನನ್ನು ದೂರ ಕಳಿಸಿದ್ದಾರೆ: ಅವರು ತನ್ನ ಸಖಿಗೆ 'ಬೆಳ್ಳಿ ಚುಕ್ಕೆ ಚಿಕ್ಕೆಯಾಗಿ ಮುಳುಗಿತಲ್ಲೆ, ಬಾಲೆ' ಎಂದು ಪ್ರತಿಮಾತ್ಮಕವಾಗಿ ಸೂಚಿಸಿದ್ದಾರೆ. ಅದು ಬೆಳಕನ್ನು ಕಂಡಾಗ ಉಂಟಾಗುವ ಸ್ಥಿರ ಭಾವ. ಜ್ಞಾನದ ಆವಿಷ್ಕಾರ. ಆಗ ಅವಳ ಮನಸ್ಸು ಅರಳಿದಭಾವ: 'ಮುಕುಲ, ಅಲರು, ಮಲರು, ಪಸರ ಕಂಡು ಕಣ್ಣುಸೋಲೇ'. ವಿಕಾಸಗೊಂಡ ಅರಿವಿನಲ್ಲಿ ಜೊತೆಗಿರುವ ಸಖನಿಗೆ ತಾನೇ ಹೂಮಾಲೆಯಾಗಿ ಭಾವದುಂಬಿ ನಿಲ್ಲುತ್ತಾಳೆ. 'ಕಾದಲನೆಡೆ ಬೇಡ ಬಹಳು, ಕಾದಲೆ ಹೂಮಾಲೆ.' ರಸಿಕ ಕವಿ ಬೇಂದ್ರೆ 'ಚಂದ್ರಮುಖಿ'ಯನ್ನು 'ಹೂಮಾಲೆ'ಯಾಗಿಸಿ ಸಹೃದಯರನ್ನೂ ಹೂವಾಗಿಸಿದ್ದಾನೆ. ಮೇಲಿನ 'ನಲ್ಲೆ' 'ಹೂಮಾಲೆ'ಯಾಗುವುದೇ ಅವಳ ಪ್ರೇಮಾಂಕುರದ ರೂಪಕ. ಇಡೀ ವಾತಾವರಣವೇ ಪೊರೆವ ನೆಲೆಯಾಗುತ್ತದೆ. 'ಮುಗಿಲ

ಬಾಯಗಾಳಿಕೊಳಲ ಬೆಳಕ ಹಾಡ ಬೀರಿ.' ಆತ್ಮಸ್ಥೈರ್ಯದ ಬಾಳು ಸಾವನ್ನು ಮರೆತು ಆನಂದಮಯವಾಗುತ್ತದೆ. ಆಗ ಕವಿ ಸಖಿಯನ್ನು ಕುರಿತು ಈ ಜಗದ ದ್ವಂದ್ವ, ಕತ್ತಲು–ಬೆಳಕು ಜೀವಪೋಷಣೆಗೆ ಅವಶ್ಯಕ. ಅದಿಲ್ಲದ ಹೊರತು ಜೀವಸಂಕುಲದ ಬೆಳವಣಿಗೆಯಿಲ್ಲ. ಕಂಗೊಳಿಸುವ ಸೂರ್ಯನಂತೆ ಕಂಗೆಡಿಸುವ ಮಂಜು ಇರಲಿ ಎಂದು ಸತ್ಯದ ಅರಿವನ್ನು ಉದ್ಘೋಷಿಸುತ್ತಾನೆ. ಕತ್ತಲೆಯ ಕಾಳಜಾರುತ್ತದೆ. ಆ ಕತ್ತಲೆಯೆ – ಬೆಳಕು ಹೊಮ್ಮಿಸುವಂಥಹ ನೆಲೆಯಾಗಿ ಕಳೆದು ಹೋಗುತ್ತದೆ. ಆಗ ಸಖ ಸಖಿಯ ಕುಣಿತ ಆನಂದಲಹರಿಯಲ್ಲಿ ಮೇಳೈಸುತ್ತ 'ನಾದಲೀಲೆ'ಯಾಗುತ್ತದೆ.

'ಬೇಟೆಯಲ್ಲ; ಆಟವೆಲ್ಲ; ಬೇಟದ ಬಗೆ, ನಾರಿ,
ಮುಗಿಲ ಬಾಯ ಗಾಳಿಕೊಳಲ ಬೆಳಕ ಹಾಡ ಬೀರಿ
(ಕಂಗೊಳಿಸುವ ಕೆಂಪು ಇರಲಿ, ಕಂಗೆಡಿಸುವ ಮಂಜುಬರಲಿ)
ಕಳೆಯಲಿಲ್ಲೆ ಕತ್ತಲಂಥ ಕತ್ತಲವೇ ಜಾರಿ?
ಬೇಟೆಯಲ್ಲ; ಆಟವೆಲ್ಲ; ಬೇಟದ ಬಗೆ, ನಾರಿ'

ಕೊನೆಯ ನಾಲ್ಕನೇ ನುಡಿಯಲ್ಲಿ ನಾರಿಯು ಧೈರ್ಯಗೊಂಡ ಸಖಿಯಾಗಿದ್ದಾಳೆ. ದಾಂಪತ್ಯ ಈ ಜಗದ ವಿಸ್ತಾರಕ್ಕೆ ಪ್ರೇರಕವಾದಂತೆ ನೋವು ನಲಿವಿನ; ಭಯ ಆತಂಕಗಳ ಕೇಂದ್ರವಾಗಿದೆ. ಅದು ಸಂಕೀರ್ಣ ಬಂಧ; ಪ್ರಕೃತಿಯ ನಿಗೂಢ. 'ಕಳೆಯಲಿಲ್ಲೆ ಕತ್ತಲಂಥ ಕತ್ತಲವೇ ಜಾರಿ' ಅಂದರೆ ಕಾಲನಂತಹ ಕತ್ತಲು ಕಳೆಯಲಿಲ್ಲವೆ? ಎಂಬ ಪ್ರಶ್ನೆಯಲ್ಲಿ ಕತ್ತಲು ಇಲ್ಲವಾಯಿತು, ಕಾಲಸರಿದ ಎಂಬ ಭಾವವಿದೆ. ಈ ಬದುಕು ಎಂಬುದು 'ಬೇಟೆಯಲ್ಲ; ಆಟವೆಲ್ಲ; ಬೇಟದ ಬಗೆ, ನಾರಿ.' ಈ ಜಗತ್ತೇ ಸೃಷ್ಟಿ ಕ್ರಿಯೆಗೆ ಒಳಗಾದ ನಾದಮಾಧುರ್ಯ. ಎಲ್ಲ ವೈರುದ್ಯಗಳನ್ನು ಒಳಗೊಂಡ ಪ್ರಕೃತಿಯಲ್ಲಿ ಜೀವಸೃಷ್ಟಿಯಿದೆ. ಅದು ಈ ನೆಲ ಮುಗಿಲ ಉತ್ಸಾಹ, ಉಲ್ಲಾಸ. ಅದನ್ನು ಬೇಂದ್ರೆಯವರು 'ಮುಗಿಲ ಬಾಯ ಗಾಳಿಕೊಳಲ ಬೆಳಕ ಹಾಡು' ಎಂದಿದ್ದಾರೆ. ಅದನ್ನು ಹೀರುವಲ್ಲಿಯೆ ಬೆಳಕಿನ, ಜ್ಞಾನದ ಜೀವನೋತ್ಸಾಹ ಹೊಮ್ಮಿದೆ.

ಕೋಲಾಟದ ಲಯ, ನಾದ, ಆನಂದದಲ್ಲಿ ಈ ಜಗದ ತಾತ್ವಿಕ ಚಿಂತನೆ ರೂಪುಗೊಂಡ ಕಾವ್ಯ ಇದಾಗಿದೆ. ವಿಶ್ವಲೀಲೆಯೊಡನೆ ಮಾನವ ಲೀಲೆಯನ್ನು ಐಕ್ಯಗೊಳಿಸುತ್ತ ವಿಶ್ವಾತ್ಮಕ ವಾತ್ಸಲ್ಯದೊಡನೆ ಒಂದು ಗೂಡಿದ ಕಾವ್ಯ 'ನಾದಲೀಲೆ'.

## IV 'ಅಷ್ಟು ಪ್ರೀತಿ, ಇಷ್ಟು ಪ್ರೀತಿ'

ಪ್ರೀತಿ ಅಮೂರ್ತವಾದುದು, ಮುದ್ದು ಅದರ ಅಭಿವ್ಯಕ್ತ ರೂಪ. ಅದು ಮನದಾಳದ ಮಿಡಿತ. ಅವ್ಯಕ್ತ ಆನಂದ ಲಹರಿ. ಅದು ಪಕ್ವಗೊಂಡ ಮನದ ಪೂರ್ಣ ಫಲ. ಅದರಲ್ಲಿ ಅರೆಕೊರೆ ಎಂಬುದಿಲ್ಲ. ಅದು ಅನಂತವಾದುದು. ಹಾಗಾಗಿ 'ಅಷ್ಟು ಪ್ರೀತಿ, ಇಷ್ಟು ಪ್ರೀತಿ' ಕವನ (ರಚನೆ : ಪುಣೆ ೧೯೩೩)ದ ಭಾವ ಸಂದರ್ಭದಲ್ಲಿ ಬೇಂದ್ರೆಯವರು 'ಒಂದು ಅಪೂರ್ಣ ಪದ್ಯ. ಪ್ರೀತಿಯ ಪ್ರತಿ ಫಲ ಪ್ರೀತಿಯಲ್ಲಿಯೇ ಇದೆ. ಈ ಅನಂತ ಶಕ್ತಿಯಲ್ಲಿ ಅಷ್ಟು, ಇಷ್ಟು ಎಂಬ ಸಾಂತ ಜಗತ್ತಿನ ಭೇದಗಳಿಗೆ ಅರ್ಥವಿಲ್ಲ' ಎಂದು ನುಡಿದಿದ್ದಾರೆ. ಅಂತಹ ಪ್ರೀತಿಯನ್ನು ಮನುಷ್ಯ ತನ್ನ ಮಿತಿಯಾದ ಭೌತವಸ್ತು ವೈಭವಗಳಲ್ಲಿ ಅಳೆಯತೊಡಗಿ ಸೋತು, ಸರಳ ಸಹಜ ಪ್ರೀತಿಯೆಡೆಗೆ ಸಾಗಿದ್ದನ್ನು ಈ ಕವನ ಸಾರುತ್ತಿದೆ.

ಬೇಂದ್ರೆಯವರು 'ಒಲೆದು ಒಲಿಸಿ ಸುಖವಿರು' ಎಂಬ ತತ್ವವನ್ನು ಹೇಳುತ್ತ ಅದಕ್ಕೆ ಮನಸ್ಸಿನ ಸ್ಪಂದನ ಬೇಕೆಂದಿದ್ದಾರೆ. ಈ ಕವನದಲ್ಲಿ ಹಲವು ಹೋಲಿಕೆಗಳನ್ನು ನೀಡುತ್ತ ಮುದ್ದು, ಕಂಪುಗಳ ವೈಭವವನ್ನು ಮನಗಾಣಿಸಿರುವ ರೀತಿ ವಿಶಿಷ್ಟವಾಗಿದೆ. ಒಂಟಿ ಎಳೆಯ ಮುತ್ತಿನ ಸರವನ್ನು ಪತ್ನಿಗೆ ತೊಡಿಸಿದರೂ ಅದು ಮುದ್ದಿಗೆ ಸಮನಾದ ಕಳೆಯಿಂದ ಹೊಳೆಯಲಾರದು. ಪತ್ನಿಯ ನೋವನ್ನು ಅರಿತು ಸಮಾಧಾನಿಸಲು ಅವಳ ತೊಯ್ದ ಎದೆಗೆ ಮುತ್ತನಿಟ್ಟಾಗ ಅದು ಮುದ್ದನ್ನು ಮೀರಿದ ಮನದ ಸಂವಾದ; ಹೃದಯದ ಅನುಕಂಪದ ಕಂಪು; ಅದು ಪ್ರೀತಿ. ಮುತ್ತು ರತುನದಲ್ಲಿ ಅಳೆದದ್ದೆಲ್ಲ 'ಒಂದು ಷೋಕು–ಬರಿಯ ಜೋಕು' ಎಂದು ಅಂತರಾಳದ ಒಲ್ಮೆಗೆ ಹಾರೈಸಿದ್ದಾರೆ.

ಈ ಬದುಕಿನಲ್ಲಿರುವ ನಾಕ ನರಕವು ಕಾಮನಬಿಲ್ಲಿನ ಪ್ರೀತಿಯೆಂಬ ಬೆಳಕು ಕತ್ತಲು ಎಂದು ರೂಪಕಾತ್ಮಕವಾಗಿ ಬಣ್ಣಿಸಿದ್ದಾರೆ. ರಾಜನಂತೆ ಮೆರೆದು 'ತೊಡೆಗೆ ತೊಡೆಯ ಹಚ್ಚಿ' ಐಂದ್ರಯಿಕ ಲೋಲುಪತೆಗೆ ಜಾರಿದ್ದು ಸುಖವಲ್ಲ. ಒಲಿದ ಒಲ್ಮೆ, ನಲ್ಮೆ, ಪ್ರೀತಿ ಸುಖದ ಸ್ವರ್ಗ. 'ಒಲಿದತೋಳಿ'ನ ಒಲ್ಮೆ ಹಿರಿದು; ಅದು ಸಹಜ ಸರಳ ಸತ್ಯ. ಅದಕ್ಕಾಗಿ ಕವಿ ಅಂತಹ ಪ್ರೀತಿಯನ್ನು ಧ್ಯಾನಿಸಿ ಹೀಗೆ ನುಡಿದಿದ್ದಾರೆ:

'ಎದೆಯ ಕಣ್ಣ ಮುಚ್ಚಿಕೊಂಡು
ಏಕೊ ಏನೊ ಮೆಚ್ಚಿದೆ
ಮರದ ಅಡಿಗೆ ಗುಡಿಸಲಿರಲಿ
ಅಲ್ಲೆ ಒಲವು ಮೆರೆಯದೇ
ನಲಿವು ಮೇರೆವರಿಯದೇ!'

ಅಂತಹ ಪ್ರೀತಿ ಶಾಶ್ವತವಾದುದು 'ಒಲಿದು ಒಲಿಸಿ ಸುಖವಿರು' ಎಂದು ಹೇಳುತ್ತ, ತಮ್ಮ ತಮ್ಮ ಪ್ರೀತಿಯ ಕಿರಣವೇ ತಮಗೆ ಬೆಳಕು, ಇತರರದು ಕತ್ತಲು ಎಂಬ ದಾಂಪತ್ಯ ಪ್ರೀತಿಯ ತೃಪ್ತಿಯನ್ನು ಕಾವ್ಯವಾಗಿಸಿದ್ದಾರೆ;

'ಎಷ್ಟೆ ಇರಲಿ ಅಷ್ಟೆಮಿಗಿಲು – ತಮ್ಮ ಕಿರಣ ತಮಗೆ ಹಗಲು;
ಉಳಿದ ಬೆಳಕುಕತ್ತಲು'

## V ದೀಪ

ಬೇಂದ್ರೆಯವರು ನೀಡಿರುವ ಕವನಗಳ ಭಾವಸಂದರ್ಭಗಳು ಕೆಲವು ಕವನದ ನಾಡಿಮಿಡಿತವನ್ನು ಅರಿಯಲು ಸಹಾಯವಾಗುತ್ತವೆ. ಅಂತಹ ಕಾವ್ಯಸಂದರ್ಭ 'ದೀಪ' ಕವನಕ್ಕಿದೆ. 'ಫಾಲ್ಗುಣ ಪೂರ್ಣಿಮೆಯ ಸುಮಾರಿಗೆ ಗಂಗೋಘದಲ್ಲಿ ದೀಪತೇಲಿ ಬಿಟ್ಟು, ಅದು ತೇಲುವದೋ ಮುಣುಗುವದೋ ಎಂದು ಸಭಯ ಆಶೆಯಿಂದ ನಿರೀಕ್ಷಿಸುವ ದಂಪತಿಗಳಿಗೆ ಸಂಸಾರ ಪ್ರವಾಹದಲ್ಲಿ ಪ್ರೇಮದೀಪದ ಗತಿಯೂ ಹೀಗೇ ಎಂದು ಒಮ್ಮೊಮ್ಮೆ ಹೊಳೆಯುವದುಂಟು. ಕಾಶೀಯಾತ್ರೆಯಲ್ಲಿ ಬರೆದ ಪದ್ಯ' ಎಂಬ ಹಿನ್ನೆಲೆಯಲ್ಲಿ ಈ ಕವನವನ್ನು ಅಭ್ಯಾಸ ಮಾಡಿದಾಗ 'ದೀಪ'ವು ದಂಪತಿಗಳು ತಮ್ಮ ಜೀವನದಲ್ಲಿ ಕಾಣಬೇಕಾದ ಬೆಳಕಿನ ಜೀವನೋನ್ನತಿಯ ಪ್ರತಿಮೆಯಾಗಿರುವುದು ಕಂಡುಬರುತ್ತದೆ. ದಂಪತಿಗಳು ಜೊತೆಗೂಡಿ ಹೊರಟಂತೆ, ತರಳೆ ಇರುಳು ತನ್ನ ಪತಿಯನ್ನು ಹುಡುಕಲು ಹೊರಟ ರೂಪಕ ಇಡೀ ಪ್ರಕೃತಿಯನ್ನು ಆವರಿಸಿದ ಶೃಂಗಾರದ ಉಲ್ಲಾಸವನ್ನು ಪರಿಚಯಿಸುತ್ತಿದೆ.

'ಬಂತಿದೊ ಶೃಂಗಾರಮಾಸ
ಕಂತು ನಕ್ಕ ಚಂದ್ರಹಾಸ
ಎಂತು ತುಂಬಿತಾಽಕಾಶ
ಕಂಡವರನು ಹರಸಲು'

ಬೇಂದ್ರೆಯವರ ಕಾವ್ಯದಲ್ಲಿ 'ಸಂಗಮಿತ ಹೊಳೆ' ದಂಪತಿಗಳಿಗೆ ಪ್ರತಿಮೆಯಾಗಿ ಬಂದಿದೆ. ಅವರು 'ಜೀವದಗೆಳತಿ'ಯನ್ನು 'ಜೀವೈಕ್ಯದೊಳು ಸಂಗಮಿತ ಹೊಳೆಯಂತೆ' ಹರಿಯೋಣ ಬಾ ಎಂದಿದ್ದಾರೆ. ಅದು ದಂಪತಿಗಳು ಜೀವನದಲ್ಲಿ ಬೆರೆತು ಇರಬೇಕೆಂಬ ತತ್ತ್ವವನ್ನು ಪ್ರತಿಪಾದಿಸುತ್ತದೆ. ಅದೇ ತತ್ತ್ವ ಇಲ್ಲಿ ಇನ್ನೂ ಸಬಲವಾಗಿ ಸಮರ್ಥವಾಗುತ್ತ:

'ಗಂಗೆಯಮುನೆ ಕೂಡಿ ಹರಿದು
ಸಂಗಮ ಜಲ ಬಿಳಿದು ಕರಿದು

ತಿಂಗಳ ನಗೆ ಮೇರೆವರಿದು
ಬೇರೆ ಮೆರುಗು ನೀರಿಗು'

ಎಂದಾಗಿದೆ. ಈ ರೀತಿ ದಂಪತಿಗಳು ಸೇರುವಾಗ ಅವರ ಜೀವದ್ರವ್ಯವಾದ ಪ್ರೇಮ ಸತ್ತ್ವಕ್ಕೆ ಬೇರೆ ಬೆರಗು ಬರುತ್ತದೆ. ದಂಪತಿಗಳು ಒಂದಾಗಿ ಜೀವನವನ್ನು ಎದುರಿಸಲು ಶಕ್ತವಾಗಿ, ಸಹಬಾಳ್ವೆಯಿಂದ ಸಮರಸದಿಂದ ಸಾಗಿದಾಗ ತುಂಬು ಚೈತನ್ಯಶೀಲರಾಗುವುದನ್ನು, ಸೂಚಿಸುತ್ತದೆ.

'ಪಂಥದಿಂದ ಮನೆಯ ತೊರೆದು
ಪಾಂಥ ನೆನೆದನತ್ತು ಕರೆದು;
ಇಂಥ ಸಮಯ ಬೇರೆ ಬರದು
ದಂಪತಿಗಳಿಗಾರಿಗು!'

ಈ ನುಡಿಯು ಅರ್ಥವಾಗಬೇಕಾದರೆ ಬೇಂದ್ರೆಯವರ ಜೀವನ ಸಂದರ್ಭ ಗೊತ್ತಿರುವುದು ಅವಶ್ಯ. "೧೯೩೩ರಲ್ಲಿ ಬೇಂದ್ರೆಯವರು ನಿರುದ್ಯೋಗಿಗಳಾಗಿದ್ದರು. ಪುಣೆಯ ಕಕ್ಕನ ಆಶ್ರಯದಲ್ಲಿದ್ದು ಎಂ.ಎ. ಪದವಿ ಪಡೆಯುವ ಪಂಥತೊಟ್ಟು ಹೆಂಡತಿ ಹಾಗೂ ಇಬ್ಬರು ಮಕ್ಕಳೊಂದಿಗೆ ಪುಣೆ ತಲುಪಿದರು. ಪ್ರತಿದಿನದ ವೆಚ್ಚವೂ ಕಕ್ಕನ ಹಣದಿಂದ. ಈ ವ್ಯಥೆ ಬೇಂದ್ರೆಯವರ ಮನಸ್ಸಿಗೆ ಯಾವಾಗಲೂ ಕಾಡುತ್ತಿದ್ದಿತು. ಇಂಥ ಸಮಯದಲ್ಲಿ ಮನೆಯವರೆಲ್ಲರೂ ಕಾಶಿಗೆ ಹೊರಟರು. 'ಇಂಥ ಸಮಯ ಬೇರೆ ಬರದು' ಎಂಬ ಭಾವದಿಂದ ಬೇಂದ್ರೆಯವರೂ ಪತ್ನಿಸಹಿತ ಕಾಶಿಯಾತ್ರೆಗೆ ಹೋದರು. ಗಂಗಾಯಮುನೆಯ ಸಂಗಮದಲ್ಲಿ ದಂಪತಿಗಳು ದೀಪ ತೇಲಿಬಿಡುವ ಸಂಪ್ರದಾಯ ಅತ್ಯಂತ ಔಚಿತ್ಯ ಪೂರ್ಣ. ಆ ದೀಪದ ವೆಚ್ಚ ಕಕ್ಕನದು, ತನ್ನದಲ್ಲ ಎಂಬ ವ್ಯಥೆ ದೀಪ ತೇಲಿ ಬಿಡುವಾಗಲೂ ಬೇಂದ್ರೆಯವರಿಗೆ ಕಾಡುತ್ತಿತ್ತು ಎಂಬುದು ಕವನ ಮುಕ್ತಾಯದ 'ದೀಪ ತೇಲಿ ಬಿಟ್ಟೆವೇ– ದೀಪ ತೇಲಿ ಬಿಟ್ಟೆವು' ಎಂಬ ಸಾಲುಗಳಲ್ಲಿ ಪ್ರತಿಬಿಂಬಿತವಾಗಿದೆ. 'ಕಕ್ಕ ಕಕ್ಕಿಯ ಆದೇಶದಂತೆ ದೀಪ ತೇಲಿ ಬಿಡುತ್ತಿದ್ದೇವೆ. ಈ ದೀಪಕ್ಕಾಗಿ ಕೊಟ್ಟ ಹಣ ತನ್ನ ಸಂಪಾದನೆಯದಲ್ಲ ಎಂದಮೇಲೆ ಇದು ತನ್ನ ದೀಪವೇ ಎಂಬ ವ್ಯಥೆ ಇದೆ. 'ಇಂಥ ಸಮಯ ಬೇರೆ ಬರದು' ಎಂಬ ಒಂದೇ ಕಾರಣದಿಂದ ಪಾಂಥ – ಬೇಂದ್ರೆ – ಅತ್ತುಕರೆದು; ಕಣ್ಣೀರುನುಂಗಿ, ನಗುತ್ತ ಪತ್ನಿಯೊಂದಿಗೆ ದೀಪವನ್ನು ತೇಲಿಬಿಟ್ಟರು. ಮುಂದೆ ಎಂದೂ ಬೇಂದ್ರೆಯವರು ಕಾಶಿಗೆ ಹೋಗಲಿಲ್ಲ" ಎಂಬುದಾಗಿ ವಾಮನ ಬೇಂದ್ರೆಯವರು ಈ ಕವನದ ಔಚಿತ್ಯವನ್ನು ನೆನಪಿಸಿಕೊಳ್ಳುತ್ತಾರೆ.

ಈ ಕವನದಲ್ಲಿ ದೀಪ ದಂಪತಿಗಳ ಜೀವನದ ಬೆಳಕಿಗೆ ಸಂಕೇತವಾಗಿದೆ. ಅದನ್ನು ಅವರು ಹಿಡಿದು ಬಿಡುವುದರಲ್ಲಿ, ಆ ಬೆಳಕನ್ನು ಬೆಳಗುವುದರಲ್ಲಿ ತಾವು ಬೆಳಕಾಗಬೇಕು ಎಂಬ ಚಿಂತನೆಯಿದೆ. ದೀಪದ ಜೊತೆಗೆ ಅವರು ತಮ್ಮ ವೈಯಕ್ತಿಕತೆಯನ್ನು ತೇಲಿಬಿಡುತ್ತ ಅದು ಲೋಕದ ಬೆಳಕಾಗುವುದನ್ನು – ತಾವು ಸಮಾಜಮುಖಿಗಳಾಗಬೇಕು ಎಂಬ ಸಂಕೇತವನ್ನು ಈ ಕವನ ಸಾರುತ್ತದೆ. ಹೀಗೆ ವ್ಯಕ್ತಿ–ಸಮಷ್ಟಿಯಲ್ಲಿ ಬೆರೆತು ವಿಶ್ವ ಚಿಂತನೆಯನ್ನು ರೂಢಿಸಿಕೊಳ್ಳುವುದನ್ನು ಸಂಕೇತಿಸುತ್ತ ದಂಪತಿಗಳಾದ ಗಂಡು ಹೆಣ್ಣು ಲೋಕ ಕಲ್ಯಾಣದ, ಜಗದ ಬೆಳಕಿನ ಆನಂದದಲ್ಲಿ ತಲ್ಲೀನರಾಗುವುದನ್ನು ದರ್ಶಿಸುತ್ತದೆ. ಪ್ರಕೃತಿಯ ಶೃಂಗಾರದ, ನದಿಯ ಸಮರಸದ, ದೀಪದ ಬೆಳಕಿನ ಚಿಂತನೆಯೆ ಅವರ ಕಾವ್ಯದಲ್ಲಿ ವಿಕಾಸಹೊಂದುತ್ತಾ ಸಾಗಿದೆ. ದಾಂಪತ್ಯ ಜೀವನವು ಬೆಳಕಿನ ಉಪಾಸನೆ ಎಂಬುದಾಗಿ ಬೇಂದ್ರೆ ನಂಬಿ ನಡೆದುದು ಕಂಡುಬರುತ್ತದೆ.

## VI ನಾನುಬಡವಿ

ಬೇಂದ್ರೆಯವರ ಬಡತನದ ನೋವು ಮತ್ತು ದಾಂಪತ್ಯದ ಎದೆಯಾಳದ ಪ್ರೀತಿ 'ನಾನುಬಡವಿ' (ರಚನೆ : ಪುಣೆ, ರಾಣಿಬೆನ್ನೂರ, ೧೯೩೪) ಕವನದಲ್ಲಿ ಅಮರತ್ವವನ್ನು ಪಡೆದಿದೆ. ಇದು ಪತ್ನಿಯ ಮನದ ಭಾವಲಹರಿಯನ್ನು ಸೂಚಿಸುವ ಕವನವಾಗಿ ರಸಿಕರ ಮನಸ್ಸನ್ನು ಆರ್ದ್ರಗೊಳಿಸುವ ಮಧುರ ಭಾವದಿಂದ ಕೂಡಿದೆ. ಇಲ್ಲಿ ಪ್ರೀತಿಯ ಸಿರಿತನ ತನ್ನೆಲ್ಲ ಭಾವ ವೈಭವದೊಡನೆ ಮೆರೆದು ಸಹೃದಯರ ಹೃದಯಕ್ಕೆ ಲಗ್ಗೆಯಿಟ್ಟು ಅಲ್ಲಿ ಗೂಡುಕಟ್ಟುವ ಸತ್ತ್ವವನ್ನು ಹೊಂದಿದೆ. ಬೇಂದ್ರೆಯವರು ಬಡವರ ಹಾಡನ್ನು ಹಾಡುತ್ತ ಅವರ ಸರಳ ಸಹಜ ನುಡಿಯನ್ನು ಬಳಸಿ ಅದು ಜನರ ಮನಸ್ಸನ್ನು ಹೊಗುವಂತೆ ಮಾಡಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಈ ಕವನದ ನಾಯಕಿ ನುಡಿಯುತ್ತಾಳೆ :

'ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು.
ಬಳಸಿಕೊಂಡೆವದನೆ ನಾವು
ಅದಕು ಇದಕು ಎದಕು'

ಈ ನಾಡಿನ ಬಡವರು ಆರ್ಥಿಕ ಸಿರಿತನದಿಂದ ವಂಚಿತರಾದರೂ, ಮಾನಮರ್ಯಾದೆಗಳಿಗೆ ಅಂಜಿ ನ್ಯಾಯ, ಧರ್ಮ, ನೀತಿಯಿಂದ ಬದುಕುವ ಜನರಾಗಿದ್ದಾರೆ. ಅವರೆಲ್ಲರ ಧ್ವನಿಯಂತೆ ಈ ಹಾಡಿದೆ. ಇಲ್ಲಿ ಬಡವಿಯು ತನ್ನ ಅಂತರ್ಯದ ಸವಿಯನ್ನು ಹಾಡಾಗಿ ಹಾಡಿದ್ದಾಳೆ. ಅವಳು ಹೇಳುವ ದಾಂಪತ್ಯದ

ಸಿರಿತನ ದಂಪತಿಗಳಿಗೆ ತುಂಬಾ ಪ್ರಮುಖವಾದುದು. ತಾತ್ವಿಕವಾಗಿ ಚಿಂತನೆ ನಡೆಸಿದರೂ ಹಣ ಒಡವೆ ದಾಂಪತ್ಯ ಬಾಂಧವ್ಯವನ್ನು ಬಿಗಿಗೊಳಿಸದೆ ಪ್ರೀತಿಯೊಂದೆ ಬಂಧನದ ತಂತುವಾಗಿರುವುದು ಸತ್ಯಸಂಗತಿ. ಈ ಕಾವ್ಯದ ಬಡವಿ ಜಗದೆಲ್ಲ ಜನರ ಬದುಕಿನ ಅರ್ಥವನ್ನು 'ಒಲವೆ ನಮ್ಮ ಬದುಕು' ಎಂದು ಹಾಡಿದ್ದಾಳೆ. ಅವಳಿಗೆ ಗಂಡನೇ ಸರ್ವಸ್ವ. ನಮ್ಮ ಧಾರ್ಮಿಕ ನಂಬಿಕೆಯ ಪ್ರಕಾರ ಸುಮಂಗಲಿಗೆ ಓಲೆ ಪವಿತ್ರ. ಅವಳು ಬಡವಳು. ಅವಳಿಗೆ ಚಿನ್ನದ ಓಲೆ ಇಲ್ಲದಿದ್ದರೂ; ಅವಳಿಗೆ 'ಕಣ್ಣುಕಟ್ಟು' ವಂತ ಮೂರ್ತಿಯಾದ ಗಂಡನೇ 'ಕಿವಿಗೆ ಮೆಚ್ಚಿನೋಲೆ' ಯಾಗಿದ್ದಾನೆ. ಹೀಗೆ ನುಡಿಯುವಲ್ಲಿ ಗಂಡಿನ ಪಾವಿತ್ರ್ಯವನ್ನು, ಅವಳ ಆಭರಣವೇ ಅವನಾಗಿರುವುದನ್ನು ಕವನ ಧ್ವನಿಸುತ್ತದೆ. ಅವಳಿಗೆ ಗಂಡ ಯಾವಾಗಲೂ ಒಂದೇ ಬಗೆಯ ಪ್ರೀತಿಯನ್ನು ನೀಡುವವನು. ಅವನ ಪ್ರೀತಿಯಲ್ಲಿ ಒಂದೇ ಹದವಿದೆ. ಆದರೆ ಹೆಣ್ಣಾದ ಅವಳಿಗೆ ಗಂಡನ ಮೈಮುಟ್ಟುವುದು ಎಂದರೆ ಮೈಮುಳ್ಳು ಏಳುವ ರೋಮಾಂಚನದ ಅನುಭವ. ಅದನ್ನು ಕವಿ ರೂಪಕಾತ್ಮವಾಗಿ :

'ಚಳಿಗೆ ಬಿಸಿಲಿಗೊಂದೆ ಹದನ
ಅವನ ಮೈಯ ಮುಟ್ಟೆ
ಅದೇಗಳಿಗೆ ಮೈಯ ತುಂಬ
ನನಗೆ ನವಿರು ಬಟ್ಟೆ'

ಎಂದು ಬಣ್ಣಿಸಿದ್ದಾರೆ. ಬಡವರಾದ ಆ ದಂಪತಿಗಳಲ್ಲಿ ಒಡವೆ ಇಲ್ಲ. ಅವರಿಗೆ ಒಡವೆ ಬೇಕೆಂದೆನಿಸಿಲ್ಲ. ಅವರು ತಮ್ಮನ್ನೇ ಒಡವೆ ಎಂದು ತಿಳಿದಿದ್ದಾರೆ. ಇದು ಕಠೋರ ಸತ್ಯವೂ ಹೌದು. ಹಣ, ಒಡವೆಯನ್ನು ಸಂಪಾದಿಸುವುದು ಈ ಒಡಲು. ಅದೇ ನಿಜವಾದ ಆಸ್ತಿ. ಅದರಲ್ಲಿರುವ ಪ್ರೀತಿಯೆ ಅದರ ಮೌಲ್ಯ. ಈ ಬಗೆಯ ಸತ್ಯವನ್ನು ನೇರವಾಗಿ ನುಡಿದಿರುವುದರಿಂದ ಆ ಸತ್ಯದ ಹೊಳಪು ಸಹೃದಯರಿಗೆ ಪ್ರಕಾಶಿಸಿ ಅದು ಅವರ ಮನದ ಹಾಡಾಗಿದೆ. ಆಕೆ ನುಡಿಯುತ್ತಾಳೆ :

'ಆತಕೊಟ್ಟ ವಸ್ತು ಒಡವೆ
ನನಗೆ ಅವಗೆ ಗೊತ್ತು
ತೋಳುಗಳಿಗೆ ತೋಳ ಬಂದಿ
ಕೆನ್ನೆ ತುಂಬ ಮುತ್ತು'

ಪ್ರೀತಿಯನ್ನು ಗಂಡ ಹೀಗೆ ತೋರಿಸಿದ್ದರಿಂದ ಅವಳ ಬಾಳು ಸಾರ್ಥಕವಾಗಿದೆ. ಆ ಪ್ರೀತಿ ಪ್ರೇಮರೂಪಿಯಾಗಿ ತನ್ನ ಗಂಡನು ಮಕ್ಕಳ ಫಲವನ್ನು ನೀಡಿದ್ದಾನೆ. ತುಟಿಗೆ ಹಾಲು ಜೇನಿನ ಸವಿ ನೀಡಿದ್ದಾನೆ. ಇಷ್ಟೇ ಸಾಕು ಎಂಬ ತೃಪ್ತಿಯ ಭಾವ

ಕವನದ ನಾಯಕಿಗಿದೆ. ಇದು ಸಂಸಾರಿಗೆ ಬೇಕಾದ ತೃಪ್ತ ಭಾವ. ಅಷ್ಟಕ್ಕೇ ಎಲ್ಲರೂ ಕೂಡಿ ಬಾಳ್ವೆ ಮಾಡುವುದು. ಆದುದರಿಂದ ಆಕೆ ಸಮಾಧಾನ ಚಿತ್ತದಿಂದ ತನ್ಮಯಳಾಗಿ ನುಡಿಯುತ್ತಾಳೆ :

'ಕುಂದು ಕೊರತೆ ತೋರಲಿಲ್ಲ
ಬೇಕು ಹೆಚ್ಚಿಗೇನು?
ಹೊಟ್ಟೆಗಿತ್ತ ಜೀವ ಫಲವ
ತುಟಿಗೆ ಹಾಲು ಜೇನು'

ಈ ನುಡಿ ಜೀವನದ ಜಂಜಾಟದಲ್ಲಿರುವ ಕಾವ್ಯ ರಸಿಕರಿಗೆ ಸಾಂತ್ವನವನ್ನು ನೀಡುವ ನುಡಿಯಾಗಿ, ಇದು ಅವರ ಮನದ ಹಾಡಾಗಿದೆ. ಇಂತಹ ಸುಮಧುರಭಾವದ ಪ್ರೇಮಗೀತೆ ರಚಿಸಿರುವುದೇ ಬೇಂದ್ರೆಯವರನ್ನು ಒಲವಿನ ಕವಿಯಾಗಿಸಲು ಕಾರಣವಾಗಿದೆ. ಈ ಕವನ ವೈಯಕ್ತಿಕ ನೆಲೆಯನ್ನು ಬಿಟ್ಟು ಸಹೃದಯರನ್ನು ವ್ಯಾಪಿಸಿ ದೇಶಕಾಲಾತೀತವಾದ ಸಾರ್ವಕಾಲಿಕ ಸತ್ಯದ ದಾಂಪತ್ಯದ ಸಂದೇಶವನ್ನು ಬೀರುವ ಗೀತವಾಗಿದೆ.

## VII ಮನದನ್ನೆ

'ಮನದನ್ನೆ' (ರಚನೆ : ೧೯೩೬) ಕಾವ್ಯದಲ್ಲಿ ವಿರಸ ದಾಂಪತ್ಯದ ಚಿತ್ರಣವಿದ್ದು, ಅದು ಪತಿಪತ್ನಿಯರು ಪರಸ್ಪರರನ್ನು ತಿಳಿದು ಪ್ರೇಮಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ಹಂಬಲವನ್ನು ಹೊಂದಿದೆ.

'ಎಲ್ಲಿಹುದು ತಿಳಿವಳಿಕೆ
ಜೀವನದ ಸಲುವಳಿಕೆ'

ಎಂದು ತಳಮಳಿಸಿ ನೀರಡಿಸಿ ಬಂದೆ – ಎಂಬ ನುಡಿಯಲ್ಲಿ ಅವನ ತಿಳಿವು ಮತ್ತು ಮಾನ್ಯತೆ ಪಡೆಯುವ ಶಕ್ತಿಯ ನೆಲೆ ತನ್ನ ಪತ್ನಿ ಎಂಬ ಅರಿವಿದೆ. ನನ್ನನ್ನು ಚಿನ್ನದ ರೀತಿ ಒರೆದು ನೋಡು, ನನ್ನದು ಎದೆಯಾಳದ ಮಾತು, ಅದನ್ನಳೆದು ಮಾತಾಡು. ಯಾವುದೋ ಪರಿಸ್ಥಿತಿಯಲ್ಲಿ ವಿರಸಕ್ಕೆ ಕಾರಣವಾದ ಘಟನೆಗಳನ್ನು ನೆನೆದು:

'ಬೆಂದ ಹೆಣವನೆ ಕೊಂದು
ಭೂತಲೀಲೆಯಲೀಗ ತೊಡಗಬೇಡ'

ಎಂದು ಅಪೂರ್ವ ರೂಪಕದಿಂದ ಸತ್ತ ಘಟನೆಗಳನ್ನು ಕೆದಕಿ ಜಗಳವಾಡುವ ಮನಸ್ಸನ್ನು ಬಣ್ಣಿಸಿದ್ದಾರೆ. ಇಲ್ಲಿ ಬಳಸಿರುವ ರೂಪಕ 'ಬೆಂದ ಹೆಣ' ಬೆಂದು ಸತ್ತು

ಹೋಗಿರುವುದು. ಅದನ್ನು ಮತ್ತೆ ಕೊಲ್ಲುವುದು ಎಂದರೆ ಎಂತಹ ಅಸಹ್ಯ ಸಾಹಸ! ಹಾಗೆ ಕಳೆದ, ಸತ್ತ ಘಟನೆಗಳು ಅದರ ಭೂತಲೀಲೆ ಅಂದರೆ ಭೂತ, ದೆವ್ವದ ಭಯದ ಸಂಕೇತ. ಅದನ್ನು ಆಹ್ವಾನಿಸಿಕೊಳ್ಳಬೇಡ ಎಂಬ ಮಾತಿದೆ.

ಈ ಕವನದ ನಾಯಕ ಜೀವನದಲ್ಲಿ ಸೋತಿದ್ದು, ಸಾಂತ್ವನಕ್ಕಾಗಿ regenerate ಮಾಡುವ ಶಕ್ತಿ ಹೊಂದಿರುವ ಮಡದಿಗಾಗಿ ಆಶಿಸಿ ಬಂದಿದ್ದಾನೆ. ಅವನಿಗೆ ಅವಳ ಸಲಹೆ, ತಿಳಿವಳಿಕೆಯ ಜೊತೆಗೆ ಅವಳ ದೇಹಸಂಪರ್ಕವೂ ಬೇಕಾಗಿದೆ. ಆದಕಾರಣ ಅವನು :

'ನಿನ್ನ ತಿಳಿವನು ಹಣಿಸು
ನಿನ್ನ ಹೊಟ್ಟೆಯ ನುಣಿಸು
ಇದಿರಾಡದಿರು ಗೆಳತಿ ನೀನುಕೂಡ
ಹೃದಯವನು ರಣರಂಗ ಮಾಡಬೇಡ'

ಎಂದು ಪ್ರಾರ್ಥಿಸಿದ್ದಾನೆ.

ಈ ಸತ್ಯವನ್ನು 'ಗಂಡಹೆಂಡಿರ ಜಗಳ ಗಂಧ ತೀಡಿದ್ಹಾಂಗ' ಹಾಗೂ 'ಗಂಡ ಹೆಂಡಿರ ಜಗಳ ಉಂಡು ಮಲಗುವವರೆಗೆ' ಎಂಬ ಉಕ್ತಿಗಳಿಂದ ಜಾನಪದರು ಪ್ರತಿಪಾದಿಸಿದ್ದುಂಟು.

ಪ್ರಾರಂಭದಲ್ಲಿಯೇ ಹೇಳಿರುವಂತೆ ಅವನಿಗೆ ವಾದವಿವಾದ ಸಾಕಾಗಿದೆ. 'ಜೀವಸಂವಾದಕ್ಕೆ ಹಸಿದು ಬಂದೆ' ಎಂದು ಹೇಳುತ್ತಾನೆ. ಅವನಿಗೆ ಸಿಪ್ಪೆಸುಲಿದ ತಿಳಲು ಬೇಕಾಗಿದೆ. ಅವನು ಈ ಹಿಂದೆ ಒಳಗೊಂದು ಹೊರಗೊಂದಾಗಿದ್ದಿರಬಹುದು. ಆದಕಾರಣವೇ ಅವನು ಮನದನ್ನೆಗೆ ತನ್ನ 'ಜೀವ ಜೀವಾಳದಲಿ । ಹೃದಯಾಂತರಾಳದಲ್ಲಿ ಇಳಿದು ನೋಡು ।' ಎಂದು ಆಹ್ವಾನಿಸಿ 'ಬಗೆಯ ಬಾನ್ ಬಯಲನ್ನು' ಅಂದರೆ ತನ್ನ ಮನಸ್ಸಿನ ಒಳಹೊರಗನ್ನು 'ಅಳೆದುನೋಡು' ಎಂದು ಆಹ್ವಾನಿಸುತ್ತಾನೆ. ತನ್ನ ಜೊತೆ ಸಮಸಮನಾಗಿ ಹಾರಾಡಲು ಆಹ್ವಾನಿಸುತ್ತ ತನ್ನನ್ನು 'ಅಣಕ ಮೂದಲಿಕೆಯಲಿ ಕಟುಕಬೇಡ । ಕೆನ್ನೀರ ಕೆಸರನ್ನು ಕಲಕಬೇಡ' ಎಂದು ಅವಳ ಮೂದಲಿಕೆಯಿಂದ ಅವನು ಕೋಪಗೊಂಡು ಅವನ ರಕ್ತದೊತ್ತಡ ಹೆಚ್ಚಿ; ಅವನ ಮನಸ್ಥಿತಿ ಕಲಕುತ್ತದೆ. ಹಾಗೆ ಮಾಡಬೇಡ ಎಂದು ಪ್ರಾರ್ಥಿಸುತ್ತಾನೆ.

ಒಂದುಸಿರೆ ತಾನಾಡಿದಂತೆ ಇಹುದು.

ಮನದನ್ನ ಮನದನ್ನೆಯರು ತಮ್ಮ ಸಮಸ್ಯೆಯನ್ನು ತಾವೇ ಸಂವಾದದಿಂದ ಬಗೆಹರಿಸಿಕೊಳ್ಳಬೇಕು. ಈ ಹೃದಯ ಸಮುದ್ರದಲ್ಲಿ ಕಣ್ಣೀರಿದೆ. ಅದನ್ನು ಮುಳುಗಿನೋಡು. 'ನೆಲೆಯಿರದ ನೆಲೆ' ಈ ಬದುಕು, ಇದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸು. ಅದನ್ನು ಬಿಟ್ಟು ನಾವು ಬೇರೆ ಬೇರೆ ಎಂಬ ಭಾವದಿಂದ ಪಾಲುಗಾರಿಕೆಗಾಗಿ ಹೆಣಗಿದರೆ, ನಿನ್ನ ಸಹಜ ಸ್ತ್ರೀತ್ವಕ್ಕೆ ಆಸರೆಯಾಗುವ ನೀರಸಿಲ್ಲದಂತಾಗುತ್ತದೆ. ನಾವು ಒಂದುಗೂಡೋಣ ಎಂದು ಹೇಳುತ್ತಾ ಅವಳಿಗೆ ಒಂಟಿತನದ ಭಯ ಹುಟ್ಟಿಸಿ ಅವಳ ಏಕಾಂತದ ನೋವು ತಿಳಿಸಿಕೊಡುವುದರ ಜೊತೆಗೆ ಅವಳನ್ನು ಒಲಿಸಿಕೊಳ್ಳಲು ಅವಳ ದೇಹ ಸೌಂದರ್ಯವನ್ನು ಮತ್ತು ತನ್ನ ಸಂಪತ್ತನ್ನು ಬಣ್ಣಿಸುತ್ತಾನೆ. ಅವನು ಮನದನ್ನೆಗೆ ಗಾಳಿಮಾತು – ಅಂದರೆ ಸುಳ್ಳುಸುದ್ದಿಗೆ ಮನಸ್ಸು ತೆತ್ತು ಬೇರೆಯಾಗಬೇಡ ತನ್ನ ಜೊತೆಗೂಡು ಎಂದು ಕೇಳಿಕೊಳ್ಳುತ್ತಾನೆ.

'ನಿನ್ನ ಮೈಸಿರಿಯೇನು?
ನನ್ನ ಐಸಿರಿಯೇನು?
ಒಂದುಸಿರೆ ತಾನಾಡಿದಂತೆ ಇಹುದು
ಹೀಗಿರಲು ಬಾಳುದ್ದ ಬದುಕಬಹುದು.
ಗಾಳಿ ಮಾತುಗಳೆಂದು, ಉಸಿರನೆಳೆದಾಡಿದರೆ
ಪ್ರಾಣವೇ ಬರಿಗಾಳಿಯಾಗಲಹುದು'

ಇಲ್ಲಿ ಗಾಳಿಯ ಗಾಳಿಮಾತು, ಉಸಿರು, ಪ್ರಾಣ, ಬರಿಗಾಳಿಯಾಗಿ ವಾಚ್ಯಾರ್ಥದಲ್ಲಿ ಇದ್ದರೂ – ಪ್ರಾಣ ಹೊತ್ತಜೀವಿ ಇನ್ನೊಂದು ಪ್ರಾಣವನ್ನು ಒಲಿಸಿಕೊಳ್ಳುವ ಪ್ರಯತ್ನದಲ್ಲಿರುವಾಗ ಚಿತ್ರ ಧ್ವನಿಪೂರ್ಣವಾಗುತ್ತದೆ. ಇಲ್ಲಿ ಹೆಣ್ಣುಗಂಡಿಗೆ – ತಮ್ಮ ಅಸಹಾಯಕತೆಗಳು ಮತ್ತು ಮಿತಿಗಳುಗೊತ್ತಿದ್ದು ಅವರು ಪರಸ್ಪರರನ್ನು ಅರಿತು ನಂಬಿ ಬಾಳುವುದರಿಂದ ಅವರು ತಮ್ಮ ದೌರ್ಬಲ್ಯವನ್ನು ಮೀರಬಹುದು ಎಂಬ ಭಾವ ವ್ಯಕ್ತವಾಗಿದೆ.

ನಿನ್ನ ತಾಯ್ತನದ ಸೈರಣೆಯ ವಿತರಣೆ ಬೇಕು

ತಾನು ಗಂಡು ದರ್ಪ ತೊರೆದು ನಿನ್ನ ತೊಟ್ಟಿಲ ಮಗುವಿನಂತೆ ಬಂದಿದ್ದೇನೆ. ನನಗೆ 'ನಿನ್ನ ತಾಯ್ತನದ ಸೈರಣೆಯನ್ನು ದಯಪಾಲಿಸು' ಎಂಬಲ್ಲಿ – 'generous Indra, make this woman rich in children and fortuness, Give her ten sons and me the eleventh'[೫] ಎಂದು ಪ್ರಾರ್ಥಿಸಿದ ಋಗ್ವೇದದ ಚಿಂತನೆಯಿದೆ.

೫. ಅಕ್ಷಯ ಕುಮಾರಿದೇವಿ, A History of Sanskrit Literature, ವಿಜಯಕೃಷ್ಣ ಬ್ರದರ್ಸ್, ಕಲ್ಕತ್ತ, ಪು.–೩೨

ಕೂಡಿರಲಿ ಬಾಳು ಇಡಿಗಾಳಿನಂತೆ

ಈ ಸಂವಾದದ ನಂತರ ಮನದನ್ನೆ ಅವನನ್ನು ಕ್ಷಮಿಸಿ, ಕೂಸಿನ ರೀತಿ ರಮಿಸಿ 'ಅಂಗೈಯ ಹುಣ್ಣಿನಾರೈಕೆ ಕೊಡುವೆ। ಕೂಸೆಂದು ಹುಡುಗನೊಲು ಮುತ್ತನಿಡುವೆ' ಎಂದು ಆಶ್ವಾಸನೆ ನೀಡುವಳು. ಆ ನುಡಿಯಲ್ಲಿ 'ದುಃಖದ ಕಡಲು ಆನಂದದ ಮುತ್ತುಗಳ ತವರುಮನೆಯಾಗಿ ತೆರೆಯಬೇಕು. ಜೀವನದ ನದಿ ಮಹಾ ಜೀವನದ ಮುನ್ನೀರಿಗೆ ಹಾತೊರೆಯಬೇಕು'[೬] ಎಂಬ ಧ್ವನಿಯಿರುವುದು ಕಂಡುಬರುತ್ತದೆ.

ಆಗ ಮನದನ್ನ 'ನಿನ್ನ ಕಣ್ಣೀರ್ಮುತ್ತು। ನನ್ನ ಕೊರಳಿನ ಸುತ್ತು। ಆಭರಣವೆಂದು ಮೆರೆದಾಡುತಿರುವೆ' ಎಂದು ಹೇಳುವಲ್ಲಿ ಅವರು ಒಬ್ಬರಿಗೊಬ್ಬರು ಅರಿತು ಬೆರೆತ ಭಾವವಿದೆ. ಆ ಸಂದರ್ಭದಲ್ಲಿ ಅವನು 'ಸ್ವರ್ಗ ನರಕಕ್ಕೆ ಕರೆದಲ್ಲಿ ಬರುವೆ' ಎಂದು ಹೇಳುವನು. ಆಗ ದಾಂಪತ್ಯವನ್ನು ಕುರಿತ ಸಾರ್ವಕಾಲಿಕ ಸತ್ಯ ಈ ಕಾವ್ಯದಿಂದ ಹೊರಬೀಳುತ್ತದೆ :

'ಮಾಡದಿರು ಬಾಳನ್ನು ಬೇಳೆಯಂತೆ
ಕೂಡಿರಲಿ ಬಾಳು ಇಡಿಗಾಳಿನಂತೆ'

ವಿರಸ ಮಾಗಿ ಸರಸ ಮೂಡಿ ಇಡಿಗಾಳಿನಂತಿರುವ ದಂಪತಿಗಳು ಜಗತ್ತಿನ ಉದ್ಧಾರಕ ಸಂತತಿಯ ಜನಕರಾಗುತ್ತಾರೆ ಎಂಬ ವಿಶ್ವಚಿಂತನೆಯನ್ನು ಬೇಂದ್ರೆ ನೀಡುತ್ತಾ ನುಡಿದಿದ್ದಾರೆ:

'ಹೊಸಹುಟ್ಟು ಬರುವದಿದೆ ಇನ್ನು ಮುಂದೆ
ಆಗೋಣ ಆ ಜಗದ ತಾಯಿತಂದೆ'

## VIII ಪೋರಿ ಪೋರ

ಅನುಭವವಿಲ್ಲದ ಹುಡುಗ ಹುಡುಗಿಯನ್ನು ಪೋರಿ ಪೋರ ಎನ್ನುವರು. ಅವರು ದೈಹಿಕ ಕುತೂಹಲದಿಂದ ಆಕರ್ಷಿತರಾಗಿ ಕೂಡಿ ಧೈರ್ಯದಿಂದ ಬಾಳು ಮಾಡಲು ತೊಡಗುವ, ಸಾಹಸದ ನಾಯಕ ನಾಯಕಿಯರಾಗುವ ಚಿತ್ರ ಪೋರಿ ಪೋರ ಕವನದಲ್ಲಿದೆ. ಅವರು ಪೋರಿ ಪೋರರಾದುದರಿಂದ ತಮ್ಮ ಮುಂದಿನ ಜೀವನದ ಜವಾಬ್ದಾರಿಯನ್ನು ಶಿವನ ಮೇಲೆ ಹಾಕುತ್ತಾ ಸಂತಸದಿಂದಿದ್ದಾರೆ. ಅವರು ಜೊತೆಗೂಡಿ ಹಾಡುತ್ತಾರೆ :

೬. ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. ೨೫

'ಪೋರಿ ನೀನು, ನಾನು ಪೋರಾ
ಮಾರಿ ಕಣ್ಣಿಗೆ ಮರುಳರಾಗಿ
ನೆಚ್ಚಿ ಮೆಚ್ಚಿ ಕೂಡಿದ್ದೇವs
ಬೇರೆ ಇಲ್ಲಾ । ಇದ್ದರೆ–
ಶಿವನೆ ಬಲ್ಲಾ'

ಇದೇ ಬಗೆಯ ಭಾವಲಹರಿಯನ್ನು 'ವದತೋ ವ್ಯಾಘಾತ' ಎಂಬ ಕವನದಲ್ಲಿ 'ಬದುಕುಳ್ಳ ತರುಣ, ಬಾಳುಳ್ಳ ತರುಣಿ, ನಾಡಿದ್ದು ಆಚೆಗುಂಟು ಎದೆಗಂಟು ಬಿಚ್ಚು, ನಾಂದೆದೆಗೆ ಉಂಟು ಮುಟ್ಟಿದ್ದೆನಂಟು–ನಂಟು' ಎಂದಿದ್ದಾರೆ.

ಪೋರಿ ಪೋರ ಒಬ್ಬರಿಗೊಬ್ಬರು ಮೆಚ್ಚಿಕೂಡಿರುವುದರಿಂದ ಲೋಕರೂಢಿಯ ಮಾತಾದ – ಹೆಣ್ಣು ಮಣ್ಣು ಹಾಳಾದುದು, ಯೌವನದ ಬಣ್ಣ ಈ ಹುರುಪು ಸದಾ ಇರುವುದಿಲ್ಲ, ಈ ಬಾಳು ಸುಳ್ಳಾಟ – ಎಂಬುದನ್ನು ಕೇಳಿದ್ದರೂ ಅವರು ಆ ನುಡಿಗಳಿಗೆ ಹೆದರಿಲ್ಲ. ತಾವು ಕೂಡುವಾಗ ಇಂತಹ ನುಡಿ ಹೇಳಿ ತಮ್ಮನ್ನು ಯಾರೂ ಹೆದರಿಸಲಿಲ್ಲ ಎಂದು ಅವರು ಹೇಳುವಲ್ಲಿ ಅವರ ನಿಜಪ್ರೀತಿ ವ್ಯಕ್ತವಾಗಿದೆ. ಈ ಮುಕ್ತ ಮನಸ್ಸಿರುವುದರಿಂದ ಅವರಿಗೆ ತಾವು ಕೂಡಿರುವುದು ಆಟದಂತಿದೆ. ನಿಸರ್ಗ ಸಹಜ ಸೆಳೆತಕ್ಕೆ ಒಳಗಾಗಿ ಪ್ರೇಮಿಗಳ ಕೂಟ ಮತ್ತು ಬಾಳನ ಮಾಟ ಈ ಕವನದ ಜೀವಾಳವಾಗಿದೆ. ಹೀಗೆ ಗಂಡು–ಹೆಣ್ಣುಗಳು ಧೈರ್ಯದಿಂದ ಕೂಡಿ ಬಾಳ್ವೆ ಮಾಡಬೇಕು ಎಂಬ ತತ್ವವನ್ನು ಬೇಂದ್ರೆಯವರು ಇಲ್ಲಿ ಸಾರಿರುವುದು ಕಂಡುಬರುತ್ತದೆ. ಪೋರಿಪೋರ ಹಾಡುತ್ತಾರೆ :

'ಆಡಿದ್ದೊಂದs ನೋಡಿದ್ದೊಂದs
ಹೂಡಿದ್ದೊಂದs ಕೂಡಿದ್ದೊಂದs
ಬೇರೆ ಮಾತು ನನಗ ನಿನಗs
ಗೊತ್ತs ಇಲ್ಲಾ । ಗುಟ್ಟು
ಶಿವನೆ ಬಲ್ಲಾ'

## (ಆ) ವಿರಹ – 'ಒಲುಮೆಯ ಕಿಚ್ಚು'

ತೀನಂಶ್ರೀಯವರು ಭರತನ ರಸ ಪ್ರಭೇದಗಳ ವಿವರ ನೀಡುತ್ತಾ ಶೃಂಗಾರ ರಸದ ಬಗ್ಗೆ "ಈ ರಸಗಳಲ್ಲಿ ಮೊದಲನೆಯದು ಶೃಂಗಾರ, ಪಟ್ಟಿಯಲ್ಲಿ ಮಾತ್ರವಲ್ಲ, ಜನಪ್ರಿಯತೆಯಲ್ಲಿ ಕೂಡ. ಸ್ತ್ರೀ ಪುರುಷರಿಗಿರುವ ಪರಸ್ಪರ ಪ್ರೇಮವೇ ರತಿ. ಇದನ್ನು ಅರಿಯದ ಮಾನವರಿಲ್ಲ; ಪಶು–ಪಕ್ಷಿಗಳಲ್ಲೂ ಈ ಆಕರ್ಷಣೆಯುಂಟೇ ಉಂಟು.

ರತಿಭಾವ ಹೀಗೆ ಸಕಲ ಹೃದಯ ಸಂವಾದಿಯಾಗಿರುವುದರಿಂದ ರಸಗಳಲ್ಲಿ ಶೃಂಗಾರಕ್ಕೆ ಪ್ರಮುಖ ಸ್ಥಾನ ದೊರೆತಿದೆ. ಸಂಭೋಗ ಶೃಂಗಾರ, ವಿಪ್ರಲಂಭ ಶೃಂಗಾರ ಎಂದು ಇದರಲ್ಲಿ ಎರಡು ಬಗೆ. ಒಂದರ ವಸ್ತು ಪ್ರಿಯರ ಸೇರಿಕೆ, ಇನ್ನೊಂದರದು ಅಗಲಿಕೆ" ಎಂದು ತಿಳಿಸಿದ್ದಾರೆ.

ಈ ಎರಡು ಬಗೆಯ ಶೃಂಗಾರದಲ್ಲಿ ವಿಪ್ರಲಂಭ ಶೃಂಗಾರದಲ್ಲಿಯ ಕಿಚ್ಚು ಬೇಂದ್ರೆಯವರ ಕವನದಲ್ಲಿ 'ಒಲುಮೆಯ ಕಿಚ್ಚಾಗಿದೆ'. ಬೇಂದ್ರೆಯವರು ಈ ಭೂಮಿಯ ಮಣ್ಣ ಕಣಕಣದಲ್ಲಿಯೂ ಸುಪ್ರೇಮವನ್ನು ಕಾಣಲು ಕಾತರಿಸಿದ ಮಂಗಲಭಾವದವರು. ಅವರು ಹೆಣ್ಣಾದ ಪೃಥ್ವಿ ಅವಳ ಒಡೆಯನಾದ ಬಾನಿನಿಂದ ಅಗಲಿ ವಿರಹ ಬವಣೆಯಲ್ಲಿ ಸುತ್ತುತ್ತಿದ್ದಾಳೆ. ಅವಳು ವಿರಹದಲ್ಲಿ ಸುರಿಸಿದ ಕಣ್ಣೀರು ಕಡಲಾಗಿ, ಅದು ಕಾದು ಮೋಡವಾಗಿ ಬಾನಿನ ಒಡೆಯನನ್ನು ಕೂಡಿದಾಗ, ಅವನು ಅದನ್ನು ಮಳೆಯಾಗಿ ಸುರಿಸುವನು. ಅವಳ ಕಣ್ಣೀರೆ ಮಳೆಯಾಗಿ ಉದುರಲು ಮೈಯೆಲ್ಲ ಪುಳಕಗೊಂಡಂತೆ ಹೃದಯ ಹಚ್ಚನಾದಂತೆ ಅವಳು ಹಸಿರು ಬೆಳೆ ಪಡೆಯುತ್ತಾಳೆ ಎಂದು ಕಲ್ಪಿಸಿದ್ದಾರೆ. ಇಂತಹ ಭೂಮಿ ಮತ್ತು ಬಾನಿನ ನಲ್ಲೆ ನಲ್ಲರ ಪ್ರೀತಿ, ಅವರ ವಿರಹ, ಸ್ನೇಹದಾಸೆ ಅದರ ಫಲರೂಪಿಯಾದ ಹಚ್ಚ ಹಸಿರು ಬೇಂದ್ರೆಯವರ 'ಒಲುಮೆಯ ಕಿಚ್ಚಿನ' ಸುಂದರ ರೂಪಕವಾಗಿದೆ. ಅದನ್ನು 'ಮೇಘದೂತ'ದ ಪೀಠಿಕೆಯಲ್ಲಿ 'ಭೂಮಿಯಕಾಮ' ಎಂದು ಕರೆದಿದ್ದಾರೆ.

'ಮಣ್ಣು ಹೆಣ್ಣು ಬಾನೊಡೆಯನಿಂದ ಅಗಲಿಹಳನಾದಿಯಿಂದ
ವಿರಹ ಬವಣೆಯಲಿ ತಿರುಗೆ ತಿರುಗುವಳು ಹೊತ್ತು ಸುತ್ತಿನಿಂದ
ಕಣ್ಣನೀರು ಕಡಲಾಗಿ ಕಾದು ಉಗಿಯಾಗಿ ಮೋಡವಾಗಿ
ಎದೆಗೆ ಉದುರೆ ಬಾನಿಂದ, ನವಿರುವಳು ಹೃದಯ ಹಚ್ಚನಾಗಿ'

ಈ ಮಣ್ಣು ಹೆಣ್ಣಿನ ಮಕ್ಕಳಾದ ಹೆಣ್ಣು ಗಂಡಿನ ಮೃಣ್ಮಯ ದೇಹದ ಹೃನ್ಮಯಮನದ ಪ್ರೇಮದ ಹಾಡನ್ನು ಬೇಂದ್ರೆಯವರು ನೀಡುತ್ತಾ; ಅವರ ಒಲ್ಮೆಯ ದೇವ ಕಾಮನನ್ನು – ಕಾಮದೇವ (ಮಗು)ನಾಗಿ ಪಡೆಯುವುದನ್ನು ಕಾವ್ಯವಾಗಿಸಿದ್ದಾರೆ. ಅವರು ಪುರಾಣದ ದೇವ ದೇವಿಯರ ಮತ್ತು ಐತಿಹಾಸಿಕ ರಾಜ ರಾಣಿಯರ ಸಂಭೋಗ ಶೃಂಗಾರ, ವಿಪ್ರಲಂಭ ಶೃಂಗಾರದ ಕಾವ್ಯ ರಚಿಸಿಲ್ಲ. ಅದಕ್ಕೆ ಬದಲಾಗಿ ಜನಸಾಮಾನ್ಯರ ಒಲುಮೆಯು ಹೂವಾಗಿ ಅರಳಿದ, ಶ್ರೀ ಸಾಮಾನ್ಯನ ಮಂಗಲಭಾವದ ದ್ಯೋತಕವಾದ, ಜನಪದರ ವಿರಹ ಮಿಲನಗಳನ್ನು, ಜನಪರವಾಗಿ ನೀಡಿದ್ದಾರೆ. ಅದು ನಮ್ಮ ಶಿಷ್ಟಕಾವ್ಯ ಪರಂಪರೆಯಲ್ಲಿ ಮಹತ್ವದ ಸಂಗತಿಯಾಗಿದೆ.

ಪ್ರೇಮಿಗಳು ಹತ್ತಿರವಿದ್ದಾಗ ಮೈಮರೆವು ಉಂಟುಮಾಡುವ ಶೃಂಗಾರ, ಅವರು ಅಗಲಿದಾಗ ಅನಂಗರೂಪ ತಾಳಿ ಅವರ ಮನಸ್ಸು ಪರಿಪಾಕಗೊಳ್ಳುವಂತೆ ಮಾಡುತ್ತದೆ. ಆ ಅಗಲಿಕೆಯ ವಿಪ್ರಲಂಭ ಶೃಂಗಾರವು ಬೇಂದ್ರೆ ಕಾವ್ಯದ ಮೂಸೆಯಲ್ಲಿ 'ಒಲವಿನ ಕಿಚ್ಚಾಗಿ' ಹಲವು ಭಾವಲಹರಿಯನ್ನು ತನ್ನ ಸಹೃದಯರಿಗೆ ನೀಡಿದೆ. ಒಂದಾಗಿದ್ದಾಗಿನ ರಸಭೋಗಕ್ಕಿಂತ, ಬೇರೆಯಾಗಿರುವಾಗಿನ ರಸೈಕ್ಯದಾಸೆ ರಸರೂಪಿ ಸ್ಥಿತಿಯಾಗಿರುತ್ತದೆ. ಅಂತಹ ಸ್ಥಿತಿಯಲ್ಲಿನ ವಿರಹಿಗಳ ದಗ್ಧ ಹೃದಯದ ರಸಿಕ ಮನದ ಹಾಡು ಅವರ ಅನುಭವದ ಪಾಡಾಗಿ ರಸಿಕರು ನುರಿಸಿ ಆನಂದ ಪಡುವ ಹಾಡಾಗಿವೆ.

## I ಅನಂತ ಪ್ರಣಯ

ಚಂದ್ರ ಸೂರ್ಯರಲ್ಲಿರುವ ಆಕರ್ಷಣೆಯನ್ನು ಆಧರಿಸಿ ಅದನ್ನು ಹೆಣ್ಣು ಗಂಡಿನ ಪ್ರೀತಿಯಾಗಿಸಿ ಒಂದು ನಿರಂತರ ರೂಪಕವಾಗಿ ಬೇಂದ್ರೆ ಬಣ್ಣಿಸಿದ್ದಾರೆ. ಇದೊಂದು ನವೀನ ಕಲ್ಪನೆಯಾಗಿ ಅವರ ಉಜ್ವಲ ಪ್ರತಿಭೆಗೆ ಸಾಕ್ಷಿಯಾಗಿದೆ. ಅವರು ಅದನ್ನು 'ಅನಂತ ಪ್ರಣಯ' ಎಂದು ಕರೆದಿದ್ದಾರೆ. ಇದೇ ಬಗೆಯ ಇನ್ನೊಂದು ಕವನ 'ಮುಗ್ಧೆ'. ಇಲ್ಲಿ ಸೂರ್ಯ ಮತ್ತು ಸೂರ್ಯಕಾಂತಿಯ ರೂಪಕದಲ್ಲಿ ಅನಂತ ಪ್ರಣಯ ಅಡಗಿದ್ದು; ಈ ನೆಲ ಮತ್ತು ಮುಗಿಲಿನ ಆಕರ್ಷಣೆಯನ್ನು ಧ್ವನಿಸುವಕಾವ್ಯ ಇದಾಗಿದೆ. ಆ ರೂಪಕದ ಹಿನ್ನೆಲೆಯಲ್ಲಿ ಪರಿತಪಿಸಿಸುವ ಮುಗ್ಧೆಯ ಚಿತ್ರವನ್ನೂ ನೀಡಿ ಗಂಡು-ಹೆಣ್ಣಿನ ಆಕರ್ಷಣೆಯ ಒಂದು ವಿಭಿನ್ನ ದೃಷ್ಟಿಕೋನವನ್ನು ಕಾವ್ಯವಾಗಿಸಿದ್ದಾರೆ.

### ಚುಂಬಕ ಗಾಳಿಯು ಬೀಸುತಿದೆ

ಪ್ರಕೃತಿಯಲ್ಲಿರುವ ಸಹಜ ಆಕರ್ಷಣೆ, ಪ್ರೇಮದಬಂಧ ಮಿಲನದ ತೀವ್ರತೆ ಇಲ್ಲಿ ಚಂದ್ರ ಮತ್ತು ಸೂರ್ಯರ 'ಅನಂತ ಪ್ರಣಯ'ವಾಗಿದೆ. ಕಾವ್ಯದ ಹೆಸರೇ ವಾಚ್ಯಾರ್ಥವನ್ನು ಹೊಂದಿ ಅದರ ಅನಂತತೆಯನ್ನು ಸಾರುತ್ತದೆ. ಕವಿಯ ಕಲ್ಪನೆಯಲ್ಲಿ ಚಂದ್ರ ಪ್ರಿಯೆಯಾಗಿ ಸೂರ್ಯ ಪ್ರಿಯಕರನಾಗಿದ್ದಾನೆ. ನಿಸರ್ಗ ಸಹಜಗತಿಯಲ್ಲಿ ಬೀಸುವ ಗಾಳಿ, ಅವರಲ್ಲಿ ಪ್ರೀತಿಯ ಪ್ರವಾಹ ಹರಿಸಲು ಕಾರಣವಾಗಿದೆ. ಸೂರ್ಯ-ಚಂದ್ರರ ಮಧ್ಯೆಯಿರುವ ಭೂಮಿಯನ್ನು ಕವಿಯು ಪ್ರಿಯರ ಭೇಟಿಯ ಸಂಕೇತ ಸ್ಥಾನ ಅಭಿಸಾರವಾಗಿಸಿದ್ದಾರೆ. ಪ್ರಣಯಿಗಳು ಒಟ್ಟುಗೂಡಲು ನಿಶ್ಚಯಿಸುವ ಸ್ಥಳ – ಅಭಿಸಾರ-ಸುಂದರ ಕಲ್ಪನೆ! ಇಲ್ಲಿ ಅರಳಿದ ಕಾವ್ಯ ಪ್ರೇಮಿಗಳ ಹೃದಯವನ್ನು ತಲ್ಲಣಗೊಳಿಸುವ ಚುಂಬಕ ಶಕ್ತಿಯನ್ನು ಹೊಂದಿದೆ. ಕವನದ ಪೂರ್ಣಪಾಠ ಈ ಕೆಳಕಂಡಂತಿದೆ :

೧

ಉತ್ತರಧ್ರುವದಿಂ ದಕ್ಷಿಣಧ್ರುವಕೂ
ಚುಂಬಕ ಗಾಳಿಯು ಬೀಸುತಿದೆ.
ಸೂರ್ಯನ ಬಿಂಬಕೆ ಚಂದ್ರನ ಬಿಂಬವು
ರಂಬಿಸಿ ನಗೆಯಲಿ ಮೀಸುತಿದೆ.

೨

ಭೂರಂಗಕೆ ಅಭಿಸಾರಕೆ ಕರೆಯುತ
ತಿಂಗಳು ತಿಂಗಳು ನವೆಯುತಿದೆ
ತುಂಬುತ ತುಳುಕುತ ತೀರುತ ತನ್ನೊಳು
ತಾನೇ ಸವಿಯನು ಸವಿಯುತಿದೆ.

೩

ಭೂವನ ಕುಸುಮಿಸಿ ಪುಲಕಿಸಿ ಮರಳಿಸಿ
ಕೋಟಿ ಕೋಟಿ ಸಲ ಹೊಸಯಿಸಿತು.
ಮಿತ್ರನ ಮೈತ್ರಿಯ ಒಸಗೆ ಮಸಗದಿದೆ
ಮರುಕದ ಧಾರೆಯ ಮಸೆಯಿಸಿತು.

೪

ಅಕ್ಷಿನಿಮೀಲನ ಮಾಡದೆ ನಕ್ಷ-
ತ್ರದ ಗಣ ಗಗನದಿ ಹಾರದಿದೆ.
ಬಿದಿಗೆಯ ಬಿಂಬಾಧರದಲಿ ಇಂದಿಗು
ಮಿಲನದ ಚಿಹ್ನವು ತೋರದಿದೆ.

ಪ್ರಕೃತಿ ಸಹಜವಾಗಿ ಉತ್ತರ ಧ್ರುವದಿಂದ ದಕ್ಷಿಣ ಧ್ರುವಕ್ಕೆ ಮುದ್ದಿಡುವ ಲೋಹ ಚುಂಬಕದ ಗಾಳಿ ಬೀಸುತ್ತಿದೆ. ಅದರ ಬೀಸಿಗೆ ಅದರೊಡನೆ ಬರುವ ಸೂರ್ಯ ಮಂಡಲದ ಪ್ರಕಾಶದಲ್ಲಿ ಚಂದ್ರನ ಪ್ರತಿರೂಪ ಹೊಳೆದು ಅದನ್ನು ಪಡೆಯುವ ಆಸೆಯಿಂದ 'ನಗೆಯಲಿ ಮೀಸುತಿದೆ'. ಇದು ಹೆಣ್ಣಾದ ಚಂದ್ರ ಸೂರ್ಯನಿಗೆ ಆಕರ್ಷಿತವಾದ ಮೈ ಪುಲಕಗೊಂಡು ಅವನನ್ನು ಕೂಡಬೇಕೆಂಬ ಅಭಿಲಾಷೆಯನ್ನು ಹೊಂದಿರುವುದಾಗಿದೆ.

ಸೂರ್ಯನ ಆಕರ್ಷಣೆಗೆ ಒಳಗಾದ ಪ್ರಿಯೆ ಚಂದ್ರಳಿಗೆ ಮಿಲನದ ತೀವ್ರತೆ ಯುಂಟಾಗಿ ತನ್ನ ಮತ್ತು ಅವನ ಮಧ್ಯೆ ಇರುವ ಭೂಮಿಯನ್ನೆ ಪ್ರಿಯನನ್ನು ಕೂಡಲು ಸಂಕೇತ ಸಾಧನವಾಗಿಸಿ 'ಭೂರಂಗಕೆ ಅಭಿಸಾರಕೆ ಕರೆಯುತ್ತ' ಅವನಿಗಾಗಿ

ಕಾಯುತ್ತಾಳೆ. ಆದರೆ ಅವನು ಅಭಿಸಾರಕ್ಕೆ ಬರುವುದಿಲ್ಲ. ಅದರ ಫಲವಾಗಿ ಚಂದ್ರ 'ತಿಂಗಳು ತಿಂಗಳು ನವೆಯುತಿದೆ', ಆದರೆ ಈ ಸಾಲು ಹೆಣ್ಣಿನ ಹಾಗೂ ಚಂದ್ರನ ಪ್ರತಿ ತಿಂಗಳ ಬವಣೆಯನ್ನು; ರಜಸ್ವಲೆಯಾದ ನಂತರ ಪ್ರಿಯನ ಮಿಲನದ ಆಕಾಂಕ್ಷೆ ಫಲಗೊಡದೆ ನವೆಯುವುದನ್ನು; ಅದರ ಫಲವೆಂಬಂತೆ ತಿಂಗಳಾದ ಚಂದ್ರ ನವೆಯುತ್ತ ಸಣ್ಣಗಾಗುವುದನ್ನು ಧ್ವನ್ಯಾರ್ಥದಲ್ಲಿ ನಿರೂಪಿಸಿದೆ.

## 'ಕೋಟಿ ಕೋಟಿಸಲ ಹೊಸಯಿತು'

ಮತ್ತೆ ಪ್ರಿಯೆ – ಚಂದ್ರಳ ಶರೀರ ಪ್ರಕೃತಿ ಸಹಜವಾಗಿ ತುಂಬಿ ಬರುತ್ತದೆ. ಆ ರೀತಿ ಚಂದ್ರ ಮತ್ತೆ ಆಸೆ, ಹುರುಪು, ಚೇತನ, ನವಸುಗಂಧದೊಡನೆ ಅರಳಿ ನಿಲ್ಲುವುದಕ್ಕೆ 'ಭೂವನ ಕುಸುಮಿಸಿ' ಎಂಬ ಪ್ರತಿಮೆಯನ್ನು ನೀಡಿದ್ದಾರೆ. ಆ ಭೂಮಿ ಚಂದ್ರಳ ಅಭಿಸಾರವೂ ಆಗಿ ಅದು ಕುಸುಮಿಸಿ ಪುಳಕಗೊಂಡಂತೆ ತಾನೂ ಆಗಿ (ಮಿತ್ರನ ಅಂದರೆ ಸೂರ್ಯನ ಸಖಿನ ಮೈತ್ರಿಗಾಗಿ) ಪ್ರಣಯದ ಆಸೆಯಿಂದ ವಿಕಾಸಗೊಂಡು ಅದು 'ಕೋಟಿ ಕೋಟಿಸಲ ಹೊಸಯಿಸಿತು'. ಆ ಪ್ರಣಯದ ಆಕಾಂಕ್ಷೆ ಹೊಸೆದುಕೊಂಡು ಬಯಕೆ ಗಟ್ಟಿಯಾಗುತ್ತಾ ಇನ್ನೂ ಹೊಸದಾಗುತ್ತ ಸಾಗಿ ಬೇಂದ್ರೆ ಸೃಷ್ಟಿಯಲ್ಲಿ ಹೊಸಯಿಸುವ ಎಂಬ ಪದ ಹೊಸ ರೂಪತಾಳಿದೆ. ಅದು ಸದಾ ಹೊಸದಾಗಿರುವ ಗುಣವನ್ನು ಹೇಳುವ ಪದವಾಗಿದೆ. ಜೊತೆಗೆ ಕೋಟ್ಯಂತರ ವರ್ಷಗಳಿಂದ ಅದು ಹೀಗೆ ಹೊಸದಾಗುತ್ತಾ ಸಾಗುತ್ತಿರುವುದನ್ನು; ಅನಂತ ಪ್ರಣಯವಾಗಿರುವುದನ್ನು ಧ್ವನಿಸುತ್ತದೆ.

ಇಷ್ಟು ತಾಜಾತನದಲ್ಲಿ ಹೊಮ್ಮಿ ನಿಂತರೂ (ಸೂರ್ಯನ ಸ್ನೇಹದ ಕೈಸೇರದೆ) 'ಮಿತ್ರನ ಮೈತ್ರಿಯ ಒಸಗೆ ಮಸಗದಿದೆ'. ಇಲ್ಲಿ ಪ್ರತಿಯೊಂದು ಪದವು ಅಂದರೆ ಮಿತ್ರನಾದ ಸೂರ್ಯ (ಸೂರ್ಯನಿಗೆ ಇನ್ನೊಂದು ಹೆಸರು ಮಿತ್ರ) ಮೈತ್ರಿಯನ್ನು ಯಶಸ್ವಿಯಾಗಿಸದೆ, ಪ್ರದರ್ಶಿಸಿ ಮಿಲನಕ್ಕೆ ಬಂದು ಸೇರಿಲ್ಲ. ಅದು ನೋವಿನ ಸಂಗತಿಯಾಗಿ ಪ್ರೀತಿಯ, ದುಃಖದ ಧಾರೆ ತೀವ್ರವಾಗಿ ಕೂಡಿಬಂದು – 'ಮರುಕದ ಧಾರೆಯ ಮಸೆಯಿಸಿತು.'

## 'ಮಿಲನದ ಚಿಹ್ನವು ತೋರದಿದೆ'

ಇಷ್ಟೆಲ್ಲಾ ಕೋಟ್ಯಾನುಕೋಟಿ ವರ್ಷದಿಂದ ನಡೆಯುತ್ತಿದ್ದರೂ ಪ್ರಿಯೆ – ಚಂದ್ರಳಿಗೆ ಸೂರ್ಯನ ಆಕರ್ಷಣೆ ಬಿಟ್ಟಿಲ್ಲ. ಅವಳು ವಿರಹದಿಂದ ನಕ್ಷತ್ರಗಳ ಜೊತೆ ಓಡಿ ಹೋಗಲು ಮನಸ್ಸು ಮಾಡಿಲ್ಲ. ನವೆಯುತ್ತ ಅಮಾವಾಸ್ಯೆಯ ದಿನಗಳಲ್ಲಿ ಮರೆಯಾದ ಅವಳು ಪ್ರಿಯಕರನೊಡನೆ ಮಿಲನಗೊಂಡಿದ್ದಾಳೇನೊ ಎನಿಸಿ ಅವಳನ್ನು ಬಿದಿಗೆಯದಿನ ಕಂಡಾಗ ಅವಳು ಮಿತ್ರನ ಜೊತೆ ಸೇರಿದ ಗುರುತು ಅಲ್ಲಿ ಕಾಣಿಸುತ್ತಿಲ್ಲ.

'ಬಿದಿಗೆಯ ಬಿಂಬಾಧರದಲಿ ಇಂದಿಗು
ಮಿಲನದ ಚಿಹ್ನವು ತೋರದಿದೆ'

ಈ ಕವನವನ್ನು ಅಭ್ಯಾಸ ಮಾಡುತ್ತಾ ಹೋದಂತೆ ಬೇಂದ್ರೆಯವರು ಕವನ ಸೃಷ್ಟಿಯೂ ಒಂದು ಬಗೆಯ ಅನಂತ ಪ್ರಣಯಲೀಲೆ ಎಂಬುದಾಗಿ ಸೂಚಿಸಿರುವುದು ಕಂಡುಬರುತ್ತದೆ. ಮೂಗಿನ ಎರಡು ಹೊಳ್ಳೆಗಳಲ್ಲಿ ಪ್ರತ್ಯೇಕವಾಗಿ ಸೂರ್ಯನಾಡಿ ಹಾಗೂ ಚಂದ್ರನಾಡಿ ಕಾರ್ಯ ಮಾಡುತ್ತವೆ. ಸೂರ್ಯನಾಡಿಯ ಉಸಿರಾಟ ದೇಹದ ಕಾವನ್ನು ಮತ್ತು ಚಂದ್ರನಾಡಿಯ ಉಸಿರಾಟ ದೇಹದ ತಂಪನ್ನು ಕಾಪಾಡುತ್ತದೆ. ಆದುದರಿಂದ ದೇಹದ ಸಮಶೀತೋಷ್ಣ ಗುಣಧರ್ಮ ಕಾಪಾಡಲ್ಪಟ್ಟು ಆರೋಗ್ಯ ಸರಿಯಾಗಿರಲು ಸಾಧ್ಯವಾಗುತ್ತದೆ. ಪುರುಷ–ಸ್ತ್ರೀ ಸಂಭೋಗದಲ್ಲಿ ಈ ನಾಡಿಗಳ ಮಿಡಿತ ಬೆಳೆಯುತ್ತದೆ ಎಂಬುದಾಗಿ ಶರೀರಶಾಸ್ತ್ರ ವಿವರಿಸುತ್ತದೆ. ಸೂರ್ಯ ಮತ್ತು ಚಂದ್ರರ ಮಿಲನವಾಗದಿರುವುದು ಸೃಷ್ಟಿಯಲ್ಲಿ ಸಾಗಿರುವ ಅನಂತ ಪ್ರಣಯದ ಲಕ್ಷಣ. ಅವು ಒಂದಾಗಿ ಬಿಟ್ಟರೆ ಸಮಶೀತೋಷ್ಣತೆ ಕಾಪಾಡುವವರು ಯಾರು? ಅವರು ಆಕಾಶದಲ್ಲಿ ಮಿಲನವಾಗದೇ ನೆಲದ ಪ್ರಿಯಕರರ ಮಿಲನಕ್ಕೆ ಪ್ರಚೋದಿಸುವುದು ಅನಂತವಾಗಿ ಸಾಗಿಬಂದಿದೆ. ಸೂರ್ಯ–ಚಂದ್ರರ ನಡುವೆ ಬೀಸುವ ಚುಂಬಕ ಗಾಳಿ – ಚುಂಬಕ ತತ್ತ್ವ, ಈ ತತ್ತ್ವ ಮಾನವರಲ್ಲಿ ಚುಂಬನ ಕ್ರಿಯೆಗೆ ಪ್ರೇರೇಪಿಸುವುದು ಅನಂತ ಕಾಲದಿಂದ ನಡೆದುಬಂದಿದೆ.

## II. ಮುಗ್ಧೆ

ಇದೂ ಒಂದು ಅನಂತ ಪ್ರಣಯದ ಕವನ. 'ಅನಂತ ಪ್ರಣಯ' ಕವನದ ನಾಯಕ ಸೂರ್ಯ. ಈ ಕವನದ ನಾಯಕನೂ ಸೂರ್ಯ–ಪ್ರಿಯಕರ. ಅನಂತ ಪ್ರಣಯದ ನಾಯಕಿ ಚಂದ್ರ. ಈ ಕವನದ ನಾಯಕಿ ಒಂದು ಸೂರ್ಯಕಾಂತಿ ಸಸ್ಯ. ಮುಗ್ಧ ಹೆಣ್ಣಿಗೆ ಸುರೇಪಾನ ಸಸ್ಯದ ಹೋಲಿಕೆಯನ್ನು ಕೊಡಲಾಗಿದೆ.

ಈ ಮುಗ್ಧೆಯನ್ನು ಪ್ರಾರಂಭದಲ್ಲಿಯೇ 'ನೀಮಳ್ಳ ಜಾತಿಯ ಹೆಣ್ಣು । ಬಿಟ್ಟ ಏನು ಮಣ್ಣು । ಇರತಿ ನಲ್ಲನ್ನ' ಎಂದು ಪ್ರಶ್ನಿಸಿರುವುದರಿಂದ 'ಮಳ್ಳಜಾತಿ' ಪದದಲ್ಲಿ ಶೃಂಗಾರಕ್ಕೆ ಆಶಿಸುವ ಹೆಣ್ಣಿನ ಸಹಜ ಆಕಾಂಕ್ಷೆ ಇರುವ ಮುಗ್ಧ ಹೆಣ್ಣಿನ ಪರಿಚಯವಾಗುತ್ತದೆ. ಆ ಹೆಣ್ಣು ಸುರೇಪಾನದ ಹಾಗೆ 'ದೊರಕದಕ್ಕ ಬಾಡತಿತ್ತ' ಎಂಬ ರೀತಿಯಲ್ಲಿದೆ. ಅದಕ್ಕೆ ಸೂರ್ಯನ ಹುಟ್ಟಿನಲ್ಲಿಯೇ ಹೊಳಪು, ಅರಳುವಿಕೆ, ಸುಗಂಧ. ಅವನ ಜೊತೆ ವಿಕಾಸ; ಅವನನ್ನೆ ಅವಲಂಬಿಸಿ ಅವನ ಕೂಡೆ ಹೊರಳುವುದಾಗಿದೆ.

'ಸೂರ್ಯನ ಕೂಡ ಹೊತ್ತೇರಿ
ಧಾಂಗ ನಿನ್ನ ಮಾರಿ
ನೀ ಸುರೇಪಾನಧಾಂಗ ತಿರುವತೀದಿ'

ಸುರೇಪಾನವು ತಾನು ತಿರುವಿದರೂ ಜೊತೆಗೆ ಜೊತೆಯಾಗುವ ನಲ್ಲ ದೂರದಲ್ಲಿಯೇ ಉಳಿಯುತ್ತಾನೆ, ತನ್ನ ಜೊತೆಗೂಡುವುದಿಲ್ಲ. ನಲ್ಲ ನಿಲ್ಲದ ರಾತ್ರಿ ಅದಕ್ಕೆ ಕಡುಕತ್ತಲೆಯ ರಾತ್ರಿ. ಅಲ್ಲಿ ವಿರಹದ ಹೊರಳಾಟ. ಆ ವಿರಹದ ತೀವ್ರತೆಯು ಘನೀಭವಿಸಿದಂತೆ ಕವಿ 'ಹೊರಳಿ ಬೆಳ್ಬೆಳಗ । ಬಿಡತ ತಣ್ಣುಸಿರು' ಎಂದಿದ್ದಾರೆ. ಅವಳ ವಿರಹದ ಕಂಬನಿಗೆ ಪ್ರಕೃತಿಯೂ ಕಂಬನಿಗರೆಯುತ್ತಿರುವಂತಿದೆ, ತಂಗಾಳಿಗೆ ಉರುಳುವ ಇಬ್ಬನಿ. ಈ ಇಬ್ಬನಿಯೂ ನೀರಿನಿಂದ ಕೂಡಿದೆ, ಕಂಬನಿಯೂ ಅದೇ ದ್ರವರೂಪಿಯಾಗಿ ವಿರಹದ ಕಾವಿನಿಂದ ಅದು ಮುತ್ತಾದ ಭಾವವನ್ನು ಪ್ರತಿಮಿಸುತ್ತಿದೆ.

ಮುಗ್ಧೆಗೂ ಸಸ್ಯವಾದ ಸುರೇಪಾನಕ್ಕೂ ವಿರಹದ ತಾಪ ಸಮನಾದುದು. ಅವರು ನಲ್ಲನಿಗಾಗಿ ಆಶಿಸಿ ಅವನ ಮಿಲನದ ತಣಿವಿಗಾಗಿ ಕಾದುಕುಳಿತ ಭಾವ ಮೂರನೇ ನುಡಿಯಲ್ಲಿದೆ. ಮುಗ್ಧೆ ಮತ್ತು ಸುರೇಪಾನ ಬೇರೆ ಬೇರೆಯಲ್ಲದೆ ಒಂದೇ ಆಗಿದ್ದಾರೆ. ಮುಗ್ಧೆಯ ನಲ್ಲ, ಸುರೇಪಾನದ ಸೂರ್ಯ – 'ಅನಂತ ಪ್ರಣಯ'ದ ಸೂರ್ಯ ಎಂದು ಸ್ಪಷ್ಟವಾಗುತ್ತದೆ.

'ನೀ ನೀರು ಬೇಡುವಾ ಬಳ್ಳಿ
ನೀರನಿಲ್ಲದಲ್ಲಿ
ಬದುಕು ಎಂತೇನಃ
ಹಿತ್ತಲಗಿಡವು ಮದ್ದಲ್ಲ
ನಿನ್ನ ಸದ್ದಿಲ್ಲ
ನೀ ಸುರೇಪಾನ ಧಾಂಗ ಸೊರಗತೀದಿ'

ನೀರ–ಪ್ರಿಯಕರ, ನೀರು–ಪ್ರೇಮಪ್ರವಾಹ, ನೀರೆ–ಪ್ರೇಯಸಿ, ಪ್ರಿಯಕರ ಮತ್ತು ಪ್ರೇಯಸಿ ಹಿತ್ತಲಗಿಡದಷ್ಟು ಪರಸ್ಪರರು ಸಮೀಪರಾಗಿ ಪರಸ್ಪರರ ದುಃಖದಲ್ಲಿ ಮದ್ದಾಗಬೇಕು – ಔಷಧಿಯಾಗಬೇಕು, ಆಶ್ರಯವಾಗಬೇಕು. ಅದು ಆಗದಾಗ ಸೊರಗುವಿಕೆಯ ಸ್ಥಿತಿ ಬರುತ್ತದೆ. ಪಂಡಿತ, ವನಿತಾ–ಪ್ರಿಯೆ ಹಾಗೂ ಬಳ್ಳಿಗಳಿಗೆ ಆಶ್ರಯ ಬೇಕೇ ಬೇಕು ಎಂಬುದಾಗಿ ಪ್ರಖ್ಯಾತ ಸಂಸ್ಕೃತ ಸುಭಾಷಿತವಿದೆ. ಬೇಂದ್ರೆಯವರ ಈ ಕವನದಲ್ಲಿ ವನಿತಾ ಹಾಗೂ ಬಳ್ಳಿ ಒಂದೇ ಆಗಿ ಪ್ರಿಯಕರನ ಅಂತಃಕರಣದ ಮದ್ದನ್ನು ಬಯಸುತ್ತಿದೆ. ಅದು ಲಭಿಸದಿದ್ದರೆ ಸೊರಗುವಿಕೆ, ನರಳುವಿಕೆ ಪ್ರಾರಂಭ. ಈ ಕವನದಲ್ಲಿ ಸೂರ್ಯ–ಪ್ರಿಯಕರ, ಸೂರ್ಯಪಾನ ಸಸ್ಯ–ಪ್ರಿಯೆ, ಸೂರ್ಯನ

ಕಿರಣಗಳತ್ತ ಮುಖ ಮಾಡಿ ಅರಳುವುದು ಸೂರ್ಯಪಾನದ ಸ್ವಭಾವ. ಸೂರ್ಯನ ಬೆಳಕೇ ಸಿಗದಿದ್ದರೆ ಸೂರ್ಯಪಾನ ಬಾಡುವುದು ನಿಶ್ಚಿತ. ನಿಸರ್ಗದ ಈ ಗುಣ ಧರ್ಮವನ್ನು ಪ್ರಿಯಕರ-ಪ್ರೇಯಸಿಗೆ ಅನ್ವಯಿಸಿದ್ದು ಈ ಕವನದ ವಿಶೇಷ.

## III ನಾನೊಂದು ನೆನೆದರೆ

ಬೇಂದ್ರೆಯವರು ವಿರಹದಿಂದ ನೊಂದುಬೆಂದ ಪ್ರಣಯಿನಿಯ ಹಲವಾರು ಉತ್ತಮ ಕವನಗಳನ್ನು ನೀಡಿದ್ದಾರೆ. ಆದರೆ ವಿರಹ ಬೇಗೆಗೆ ಒಳಗಾದ ರಸಿಕನ ಚಿತ್ರಣದ ಕವನಗಳು ಇಲ್ಲವೇ ಇಲ್ಲವೆನ್ನಬಹುದು. ಅಂತಹದರಲ್ಲಿ ಸರಸಿ ಪುರುಷ ತನ್ನ ಒಳರಸಿಕ ಭಾವಕ್ಕೆ ತಡೆಯಾದಾಗ ತನ್ನ ಅಂತರಂಗವನ್ನು ತೋಡಿಕೊಂಡ ಕವನ 'ನಾನೊಂದು ನೆನೆದರೆ'.

ಸರಸಿ ರಸಿಕ ತನ್ನ ಪ್ರೇಮಾಕಾಂಕ್ಷೆಗೆ ಪ್ರಣಯಿನಿ ಒಲ್ಲದಾದಾಗ ಅವನು ತನ್ನ ನೋಟ, ನಗೆ, ನುಡಿ ಎಲ್ಲವೂ ಕಳೆಗುಂದಿ ಹೋದುದನ್ನು ಹಾಡಾಗಿಸಿದ್ದಾನೆ. ಅದು ಅವನ ಪುರುಷತ್ವದ ಇತಿಮಿತಿಗಳನ್ನು ಸೂಚಿಸುತ್ತಾ ಅವನನ್ನು ಚಿಂತೆಗೀಡುಮಾಡಿದೆ.

'ನಾನೊಂದು ನೆನೆದರೆ, ನೀ ನೊಂದು ನೆನೆಯುಽತಿ
ನನ್ನ ನಗಿಗ್ಯಾಕ ಮುನಿಯುಽತಿ
ಎಂದೆನಗ
ಬಿದ್ದಿತು ನೋಡುಽ ಇತಿಮಿಽತಿ'

ರಸಿಕನ ರಸ – ತನ್ನ ರುಚಿ, ಗಂಧ, ಆರ್ದ್ರತೆಯನ್ನು ಪ್ರತಿಸ್ಪಂದನವಿಲ್ಲದಿದ್ದರೆ ಕಳೆದುಕೊಳ್ಳುತ್ತದೆ. ಅವನ ರಸ ಅರಸವಾಗಿ ಸವಿಗನಸು ಹರಿದು ಹೋಗುತ್ತದೆ. ಪ್ರಣಯಿನಿ ತನಗೆ ದೊರಕದಿರುವಾಗ ಅವಳು ಅರಸ ತೂಕದ ಹೆಣ್ಣಾಗಿ ದೂರವಾದವಳು ಎಂಬುದನ್ನು ಸೂಚಿಸುತ್ತಲೇ, ಅವಳು ಅವನ ಬಗ್ಗೆ ಅರಸಳಾದ ಭಾವವನ್ನು ಕಾವ್ಯ ವ್ಯಂಜಿಸಿದೆ.

ಮೂರನೆಯ ನುಡಿಯಲ್ಲಿ ಐಂದ್ರಯಿಕ ಭೋಗದ ಭೌತಿಕ ಲಾಲಸೆಯಿಂದ ವಂಚಿತನಾದ ಸರಸಿಯ ವಿರಸದ ಉರಿ ಆ ಭೋಗದ ಪ್ರತಿಮೆಗಳಿಂದಲೆ ಧಗ ಧಗಿಸಿದೆ. ಗಮಗಮಿಸುವ ಹೂಗಳಿಂದ ಸುಸಜ್ಜಿತವಾದ ಹಾಸಿಗೆ, ದೀಪ ಮಾಲೆಯಿಂದ ಕಂಗೊಳಿಸಿ ಅವನಲ್ಲಿ ಆನಂದ ದೀಪ್ತಿ ಹೊಮ್ಮಿಸಬೇಕಾದ ಮಂಚದ ಹೊಳಪು ಪ್ರಣಯಿನಿ ಒಲಿಯದ ಕಾರಣದಿಂದ ತನ್ನ ಎದಿಯ ಧಗಧಗ ವಿರಹದ ಉರಿಯಿಂದ ಉರಿದು ಹೋಗಿದೆ. ಅವನ ಒಳಗಿನ ಧಗೆಗೆ ಹೊರಗಿನ ಜಗತ್ತೇ ಬೆಂಕಿ ಹೊತ್ತಿ ಉರಿದಂತಾಗಿದೆ.

'ಹಾಸಿಗಿ ಮಗ ಮಗ, ಮಂಚsಕ ಝುಗ ಝುಗ
ನನ್ನ ಎದಿಮಾತ್ರ ಧಗ ಧsಗ
ಉರಿದೀತು
ಹೊತ್ತಿsತ ಬೆಂಕಿ ಹೊರ ಜಗಾ.'

ಪ್ರಿಯೆ ಒಲಿಯದ ಕಾರಣ ಅವನ ರಸಿಕತೆಯ ಆಹ್ಲಾದ, ಕಂಪು, ಒಗರು, ಬಣ್ಣ, ರಸಭಾವಗಳು ಒಮ್ಮೆ ಇದ್ದದ್ದು ಈಗ ಇಲ್ಲವಾಗಿವೆ. ಅದನ್ನು ಕವಿ 'ಸವಿಸತ್ತ ತಂಬೂಲ' ರೂಪಕದಿಂದ ಸವಿರಸ ಕಹಿವಿಷವಾಗಿ ಇದ್ದೂ ಅನುಭವಿಸಲಾಗದ ಸ್ಥಿತಿಯನ್ನು ಚಿತ್ರಿಸಿದೆ.

'ಸವಿಸತ್ತ ತಂಬೂಲ ಸೊಪ್ಪಾತು ದವಡ್ಯಾಗ
ಅದರ ಸವಿರಸ ಕಹಿವಿಷ
ಆಗಿತ್ತ
ನುಂಗಲುಗಳಲು ಎದೆಯಿಲ್ಲ'

ರಸಿಕನ ವಿರಸದ ಉರಿ, ತಳಮಳ, ಸಂಕಟ ಸ್ಫೋಟಗೊಂಡ ರೀತಿ ಕೊನೆಯ ನುಡಿಯಲ್ಲಿದೆ. 'ಎಸ್ತಕನ್ನಡಿ', 'ಕುಡಿಚಿವುಟಿ' ಪ್ರತಿಮೆಗಳು ಪ್ರಣಯ ಭಗ್ನಗೊಂಡದ್ದನ್ನು ಸಮರ್ಥವಾಗಿ ಧ್ವನಿಸಿವೆ. 'ಎಸ್ತ', 'ಬೆಸ್ತು', 'ಹಸ್ತ' ಜನಪದ ನುಡಿಗಳು ಕೈಗೂಡದ್ದರ ಭಾವವಾಹಕವಾಗಿವೆ. ಬೇಂದ್ರೆಯವರು ಜನರ ನಾಲಗೆಯಲ್ಲಿ ನಲಿದಾಡುವ ನುಡಿಯನ್ನು ಶಿಷ್ಟಕಾವ್ಯದಲ್ಲಿ ಬೆಸೆದು ಅದರ ಬೆರಗನ್ನು ಹೆಚ್ಚಿಸಿದ್ದಾರೆ.

'ಎಸ್ತಕನ್ನಡಿ ಹರಳು ಬೆಸ್ತು ಕೂಡೀತೇನ?
ಹಸ್ತ ಕರುಳೀನ ಕುಡಿ ಚಿವುಟಿ
ಕಡೆಗೊಮ್ಮೆ
'ಸೊಸ್ತಿ' ಎಂದsರು ಫಲವೇನು?

## IV ಮರೆಯುವೆಯೋ, ಅರಿಯುವೆಯೋ! ಮತ್ತು ಎಲ್ಲಿರುವೆ ರಾಜಗಂಭೀರಾ!

ಬೇಂದ್ರೆಯವರು ನೀಡಿರುವ ಭಾವಸಂದರ್ಭದಂತೆ ಈ ಎರಡು ಕವನಗಳು ವಿರಹ ಗೀತೆಗಳಾಗಿವೆ : 'ಸತಿ' ಎಂಬ ಒಂದು ಅರ್ಧಲಿಖಿತ ನಾಟಕದೊಳಗಿನ ಎರಡು ಗೀತಗಳು. ಪಾಟಲೀಪುತ್ರದ ರಾಜನೊಬ್ಬ, ಮುನ್ನೂರು ಹೆಣ್ಣು ಮದುವೆಯಾಗಿ, ವೈಶಾಲಿಯ ವಿರಕ್ತ ಶ್ರೇಷ್ಠಿ ಧ್ಯಾನಗುಪ್ತನ ಹೆಂಡತಿ-ಸತಿಯನ್ನು ಅರಮನೆಗೆ ಆಮಂತ್ರಿಸುತ್ತಾನೆ. ಅರಮನೆಯ ಸೆರೆಮನೆಯಲ್ಲಿ ಇದ್ದ ಆ ಮುನ್ನೂರು ಹೆಂಗಳೆಯರು

ರಾತ್ರೀಗೀತ, ಉದಯ ಗೀತಗಳಿಗಾಗಿ ಹೇಳುವ ಎರಡು ಹಾಡುಗಳು ಇವು. ಅದನ್ನು ಹೊರತುಪಡಿಸಿ ಆತ್ಮ-ಪರಮಾತ್ಮನ ಸಂಬಂಧವನ್ನು ಕುರಿತು ಭಾವಲಹರಿಯಾಗಿಯೂ ಈ ಎರಡು ಕವನಗಳಿವೆ.

ಬೇಂದ್ರೆಯವರು ರಾತ್ರಿಗೀತ ಎಂದು ಕರೆದಿರುವ 'ಮರೆಯುವಿಯೋ, ಅರಿಯುವಿಯೋ' ಕವನ ಆ ಮುನ್ನೂರು ಹೆಂಗಳೆಯರ ವಿರಹವೇದನೆಗೆ ಕಾರಣನಾದ ರಾಜನ ಬೆರೆಯುವಿಕೆಗೆ ಆಶಿಸಿವೆ. ಅವನೊಮ್ಮೆ 'ಮನದನ್ನ, ಬಲುಚೆನ್ನ, ಮಿದುಚಿನ್ನ, ಸವಿಜೊನ್ನ' ಆಗಿದ್ದವನು. ಅವರ ಮನದನ್ನನಾಗಿದ್ದ ಕವನದ ನಾಯಕ ರಾಜ ಇಲ್ಲಿ ಅಗೋಚರನಾಗಿದ್ದಾನೆ. ಅವನಿಗಾಗಿ ಕಾದು, ನಿರಾಶೆಗೊಂಡರೂ, ಎಲ್ಲ ಬಂಧನ ಆತಂಕಗಳಲ್ಲಿದ್ದರೂ ಆಶಾವಾದಿಯಾಗಿರುವುದು ಈ ಕವನದ ಮುನ್ನೂರು ಹೆಣ್ಣುಗಳ ವೈಶಿಷ್ಟ್ಯವಾಗಿದೆ. ಕವನದ ಪಲ್ಲವಿಯಲ್ಲಿ :

'ಎಲ್ಲಿ ಮರೆಯುವಿಯೋ।

ಇಲ್ಲ ಅರಿಯುವಿಯೋ। ನಮ್ಮನ್ನs' ಎಂದು ರಾಜನನ್ನು ನೆನೆಯುತ್ತ ಅವನಿಗೆ ತಮ್ಮ ಅರಿವಾಗಲೆಂದು, ತಮ್ಮನ್ನು ಮರೆತು ತೊರೆಯಬೇಡವೆಂದು ಹಾಡಿದ್ದಾರೆ. ಅವನ ಹೃದಯ ಪಂಜರದ ಗಿಳಿಯಾಗಲು ಬಂದು, ಈಗ ನವರತ್ನಸಾರದ ಭವದ ಕಾಡಿನ ಅರಮನೆಯ ಬಂಧಿಯಾಗಿದ್ದಾರೆ. ಅವನ 'ಮೊದಲ ಸೋಂಕಿಗೆ ಇನ್ನೂ ನೆನವು ನವಿರಾಗುತಿದೆ' ಎಂಬ ಶೃಂಗಾರ ಸಿಹಿಯಲ್ಲಿ ಅವರ ಮನದ ಕಾವು ಇನ್ನೂ ಬಿಸಿಯಾಗಿರುವುದರ ಸೂಚನೆಯಿದೆ.

'ಇರುಳು ಮುಸುಕಲು ಬಂದು, ನೆರಳು ನೆರದಿಹೆವಿಲ್ಲಿ.'

ಎಂಬ ನುಡಿಯಲ್ಲಿ ಅವರ ಅರ್ಥಹೀನ ಉಳಿವು ಚಿತ್ರಿತವಾಗಿದೆ. ಅವರು ಸೂರ್ಯ (ಮಿತ್ರರಾಜ) ನಿಲ್ಲದ ನೆರಳಿನಂತೆ ಇದ್ದು; ವಸ್ತುವಿಲ್ಲದ ನೆರಳಾಗಿದ್ದಾರೆ. ಆ ಹೆಣ್ಣುಗಳ ಹಾಗೂ ಅರ್ಥರಹಿತವಾದ ಹೀನಾವಸ್ಥೆಯ ಧ್ವನಿ ಇದಾಗಿದೆ. ಈ ಹೆಣ್ಣುಗಳು 'ಚೆಲುವಗೊಂಬೆ'ಗಳಂತಾಗಿರುವದು ಅವರ ವಿರಹಾವಸ್ಥೆಯ; ಏಕಾಕಿತನದ ಬಂಧಿಯಾಗಿ ಕಾಮಭಿಕ್ಷೆ ಆಶಿಸುವ ಜೀವಚ್ಛವವಾದ ಹೀನಸ್ಥಿತಿಯಾಗಿದೆ.

'ಇರುಳು ಮುಸುಕಲು ಬಂದು, ನೆರಳು ನೆರೆದಿಹೆವಿಲ್ಲಿ.
ಕರುಣೆ ಬಾರ್‍ಯೆ ಮಾರಾ । ನೀರಾ ।

ಚೆಲುವ ಗೊಂಬೆಗಳಲ್ಲಿ
ಒಲುಮೆಯುಸಿರನು ತುಂಬಿ
ಪೊರೆಯುವಿಯೋ ನಮ್ಮನ್ನಾ'

*****

ನೆರಳೇ ತಾವಾಗಿ ರಾತ್ರಿಗೀತ ಹಾಡಿದ ಆ ಹೆಣ್ಣುಗಳು ಹಾಡಿದ ಉದಯಗೀತ 'ಎಲ್ಲಿರುವೆ ರಾಜಗಂಭೀರಾ!' ಅವರಿಗೆ ಹಗಲಾದರೂ ಬೆಳಕಿಲ್ಲದ ಸ್ಥಿತಿ; ಮಾತಾಡಿದರೂ ಪ್ರತಿ ಸ್ಪಂದನವಿಲ್ಲದ ನಿರಾಶೆ ಆವರಿಸಿದೆ. ಅದು 'ಹಾಳು ದೇಗುಲದಲ್ಲಿ, ಗಾಳಿ ಗೋಳಿಡುವೊಲು' ಎಂಬ ರೂಪಕದಲ್ಲಿ ಚಿತ್ರಿತವಾಗಿದೆ. ಕಲ್ಲು, ಗೋಡೆ, ಸೊಲ್ಲು ನೀಡಿದರೂ ಆ ರಾಜ ಗಂಭೀರ ಮಾತಿಲ್ಲದೆ ಇದ್ದಾನೆ. ಅವರ ಶೃಂಗಾರ ಆಕಾಂಕ್ಷೆ ಪ್ರತಿಸ್ಪಂದನ ರಹಿತವಾಗಿದೆ.

ಹಗಲಾದರೂ ಅವರಿಗೆ ಇರುಳಿನ ಅನುಭವವೇ ಗಾಢವಾಗಿದೆ. ಆ ಬಳ್ಳಿಗಳು ರಾಜನ ಬೆಳಕು, ಗಾಳಿ ಇಲ್ಲದೆ ಬಾಡಿ ಹೋಗಿವೆ. 'ಮೊದಲ ಸೋಂಕಿಗೆ ಇನ್ನೂ ನೆನವು ನವಿರಾಗಿರುವ' ಅವರ ಹೃದಯ ಮೊಗ್ಗೆಯಾಗಿಯೇ ಇವೆ. ಅವರು ಮೊಗ ಕೆಳಗೆ ಹಾಕಿದ ಚಿಕ್ಕೆಗಳಂತೆ; ನೀರಲ್ಲಿ ಅಲ್ಲಾಡುವ ನೆರಳುಗಳಂತೆ ಆಗಿ ಬೆಳಕೇ ಇಲ್ಲದೆ 'ಅಮಾವಾಸೆ ಹರಹಿದ' ಸ್ಥಿತಿಯಲ್ಲಿದ್ದಾರೆ. ಅವರು ಮದುವೆಯಾದ ಒಂದೇ ಕಾರಣದಿಂದ 'ನಲ್ಲ ನೀರಡಿಸಿದೆ, ಕಾವೇರಿ ಆರಿದೆ' ಎಂದು ತಮ್ಮ ಒಲುಮೆಯ ಕಿಚ್ಚನ್ನೆಲ್ಲಾ ಧ್ವನಿಯಾಗಿಸಿದ್ದಾರೆ. ಅವನು ಕಾಣದಂತಾಗಿದ್ದರೂ ಕಾಣುವ ಆಸೆಯಿಂದ ಕಾಯುತ್ತಿದ್ದಾರೆ. ಅವರು ನಂಬಿಬಂದ ಒಡವೆಯಲ್ಲಿ ಇನ್ನೂ ಆಸೆ ಇಟ್ಟುಕೊಂಡಿದ್ದಾರೆ.

'ತನ್ನ ಒಡವೆಯೆ ತನಗೆ, ಎರವಾಗಿ ಹೊರತಾಗೆ,
ನಿರ್ಜೀವವೀ ಜೀವಾ;
ಇಲ್ಲಿ ರಂಭೆಯರೆಲ್ಲಾ, ನಂಬಿ ಕುಳಿತಿಹರಲ್ಲೋ,
ಎಲ್ಲಿರುವೆ ರಾಜಗಂಭೀರಾ – ನೀರಾ.'

# ೭. ಸಾಮಾಜಿಕಪ್ರಜ್ಞೆಯ ಕವನಗಳು

ಬೇಂದ್ರೆಯವರ ಕಾವ್ಯದಲ್ಲಿ ಸಾಮಾಜಿಕ ವಸ್ತುಸ್ಥಿತಿ ಅಗಾಧವಾಗಿದೆ. ಅವರು ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರವನ್ನು ತಾಳ್ಮೆ, ಸಹನೆ, ಮಾನವಪ್ರೀತಿ, ಮನುಷ್ಯನ ಹೃದಯ ಪರಿವರ್ತನೆ ಮುಂತಾದ ಗುಣ ವಿಶೇಷಗಳ ಬಲದಿಂದ ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ಅವರ ಸಾಮಾಜಿಕಪ್ರಜ್ಞೆಯು ಸಮಾಜದಲ್ಲಿನ ಅಸಮತೋಲನಕ್ಕೆ ಕಾರಣವಾದ ಅನ್ನವನ್ನೂ, ಹಣವನ್ನೂ ಕಾವ್ಯ ಮೂಸೆಯಲ್ಲಿ ಹಿಡಿಯಲು ಪ್ರಯತ್ನಿಸಿ ಯಶಸ್ವಿಯಾಗಿದೆ. ಕೂಲಿ ಕಾರ್ಮಿಕ, ದೀನದಲಿತ, ಬಡ ಅಸಹಾಯಕರ ನೋವಿನ ಭಾವದಷ್ಟೇ ತೀವ್ರವಾದ ಭಾಷೆಯನ್ನು ಬಳಸಿ ಆ ಹಸಿದ ತಳಮಳವನ್ನು ಶಬ್ದಗಳಲ್ಲಿ ಹಿಡಿದಿಟ್ಟಿದ್ದಾರೆ. ಅವರು "ಅನ್ನ ಮತ್ತು ಹಸಿವು ಇವಕ್ಕೆ 'ಅರ್ಥ' ಮತ್ತು 'ಕಾಮ' ಎಂಬ ದೊಡ್ಡ ಹೆಸರುಗಳಿವೆ. ಅನ್ನ-ಹಸಿವುಗಳ ತೊಡಕನ್ನು ತೊಡಕಿಲ್ಲದೆ ಬಿಡಿಸುವ ಪ್ರಯೋಗಕ್ಕೆ 'ಧರ್ಮ' ಎಂದು ಹೆಸರು. ಪಾರ್ಥಿವ ಅನ್ನವಷ್ಟೆ ಅನ್ನವಲ್ಲ. ನೀರಿಲ್ಲದೆ ಮನುಷ್ಯನು ಬಾಳಲಾರನು. ಬೆಳಕಿಲ್ಲದಿದ್ದರೆ ಬಾಡಿ ಹೋಗುವನು. ಗಾಳಿಯಿಲ್ಲದಿದ್ದರೆ ಉಸಿರಡಗಿ ಹೋಗುವನು. ನಿಜವಾಗಿಯೂ ಮನುಷ್ಯನು ಕ್ಷಣಕ್ಷಣಕ್ಕೂ ಬಾಳುವುದು ಈ ನಾಲ್ಕರಿಂದಲೂ ಅಹುದು. ಗಾಳಿ-ಬೆಳಕು – ನೀರು ಇವೂ ಅನ್ನಗಳೇ. ನಮ್ಮ ಬಾಳು-ಸಾವುಗಳೆರಡೂ ಈ ಮಹಾಭೂತಗಳ ಅಧೀನವಾಗಿವೆ.... ಮಾನವನ ಅನ್ನದಿಂದ ಅವನ ಮನವನ್ನೂ ಅಳೆಯಬೇಕಾಗಿದೆ. ಮನುಷ್ಯನ ಮೈಯು ಅನ್ನದ ಪರಿಣಾಮ. ಅದೇಕೆ ಮೈ ಕೂಡ ಅನ್ನವಲ್ಲವೇ? ಅಂತೆಯೇ ಜನರ ಮೈಗಳನ್ನೂ ಆಳಿ ಅನ್ನವನ್ನು ಅಧೀನದಲ್ಲಿಟ್ಟುಕೊಳ್ಳಲು ಶಕ್ತಿ ಮದೋನ್ಮತ್ತರು ಹವಣಿಸುವುದುಂಟು. ಅವಷ್ಟೆ ಸ್ವತಂತ್ರವಾದರೆಸಾಲದು. ಮಾನವರ ಮೈಗಳು ಪರಾಧೀನ ಉಳಿದಿರುವವರೆಗೆ ಅನ್ನದ ಇನ್ನೊಂದು ಕಗ್ಗಂಟು ಬಿಡಿಸಲಾಗದು"[೧] ಎಂದಿದ್ದಾರೆ.

ಹಸಿವು-ಅನ್ನದ ಸಮಸ್ಯೆಯನ್ನು ಹಾಗೇ ಉಳಿಸಿಕೊಂಡು ವಿಜೃಂಭಿಸುತ್ತಿದ್ದ ಧರ್ಮ ಮತ್ತು ದೇವರನ್ನು ವಾಸ್ತವ ನೆಲೆಯಿಂದ ವಿಶ್ಲೇಷಿಸಿದ ಚಿಂತನೆ ಬೇಂದ್ರೆಯವರ ಕಾವ್ಯದಲ್ಲಿದೆ. ಸಾಮಾಜಿಕ ಸಮಸ್ಯೆಯ ಮೂಲಕಾರಣಗಳನ್ನು ವೈಚಾರಿಕವಾಗಿ ಆಲೋಚಿಸುತ್ತ ಮಾನವ ನೆಲೆಯಲ್ಲಿ ಶೋಧಿಸಿದ್ದು ಬೇಂದ್ರೆ ಕಾವ್ಯದ ವೈಶಿಷ್ಟ್ಯವಾಗಿದೆ. ಅವರ ಕಾವ್ಯದಲ್ಲಿ ಹೀಗೆ ಆಗಬೇಕಾಗಿತ್ತು ಎಂಬ ವಿಮರ್ಶೆಗಿಂತ; ಅವರ ಕಾಲಘಟ್ಟದಲ್ಲಿ, ಅವರು ಬದುಕಿದ ರೀತಿಯಲ್ಲಿ ಅವರ ಕಾವ್ಯಬದುಕು ಎಷ್ಟರಮಟ್ಟಿಗೆ ಸಮಾಜದ ಅರಿವನ್ನು ತನ್ನದಾಗಿಸಿಕೊಂಡಿದೆ ಎಂಬುದನ್ನು ತಿಳಿಯೋಣ.

---

೧. ದ.ರಾ. ಬೇಂದ್ರೆ, ವಿಚಾರ ಮಂಜರಿ, ಗೀತಾಬುಕ್‌ಹೌಸ್, ಮೈಸೂರು ೧೯೬೯, ಪು. ೪೬, ೪೭, ೪೮.

## I ಭೂಮಿತಾಯಿಯ ಚೊಚ್ಚಿಲಮಗ

ಪ್ರಾಣ ಪೋಷಕವಾದ ಅನ್ನವೇ ಈ ಜಗದ ಸಾಮಾಜಿಕ ಸಮಸ್ಯೆಯ ಮೂಲವಾಗಿದೆ. ಅದರ ಉತ್ಪಾದನೆ, ಶೇಖರಣೆ, ವಿತರಣೆ, ಹಿಡಿತಗಳಲ್ಲಿಯೇ ವರ್ಗಸೃಷ್ಟಿಯ ಜಾಲವಿದೆ. ದವಸಧಾನ್ಯಗಳನ್ನು ಬೆಳೆದು ಲೋಕಕ್ಕೆ ಹಂಚುವ ಭೂಮಿತಾಯಿಯ ಚೊಚ್ಚಿಲಮಗನಾದ ರೈತನನ್ನು ಕಾಡುವ ಮೊದಲ ಚಿಂತೆಯೂ ಅನ್ನವೇ ಆಗಿರುವುದು ಈ ಲೋಕದ ದುರಂತ. ಜನಸಾಮಾನ್ಯರಲ್ಲಿ ಒಂದಾಗಿ, ಜನಪದರ ನಾಡಿ ಸ್ಪಂದನವನ್ನು ಅರಿತಿದ್ದ ಬೇಂದ್ರೆಯವರು ರೈತನ ಪರಕಾಯ ಪ್ರವೇಶ ಮಾಡಿದಂತೆ ಅವನ ನೋವನ್ನು ಕಾವ್ಯವಾಗಿಸಿದ್ದಾರೆ. ಸುಖಭೋಜನವನ್ನು ಸವಿದು ಸಂತೃಪ್ತರಾಗಿರುವ ಜನರನ್ನು ಬೇಂದ್ರೆ ಪ್ರಶ್ನಿಸಿದ್ದಾರೆ!

'ಭೂಮಿತಾಯಿಯಾ
ಚೊಚ್ಚಿಲ ಮಗನನು
ಕಣ್ತೆರೆದೊಮ್ಮೆ
ನೋಡಿಹಿರೇನು?'

ರೈತ ಮಾಡವನ್ನು ನೋಡುತ್ತ, ಉತ್ತುಬಿತ್ತು ಮಳೆಗಾಗಿ ಕಾದಾಗ ಅದು ಕಣ್ಣು ಮುಚ್ಚಾಲೆ ಆಟವಾಡಿ ಅವನನ್ನು ಅಣಕಿಸಿದೆ. 'ಮುಗಿಲೆಂಬುವದು । ಕಿಸಿದಿತುಹಲ್ಲು। ಬಂದಾ ಬೆಳೆಯು ಮಿಡಚಿಯ ಮೇವು.' 'ಕಿಸಿದಿತು' ಎಂಬ ಗ್ರಾಮ್ಯನುಡಿ, ಮತ್ತು ಈ ಕವನದ ಪ್ರತಿಪದವು ರೈತನ ಒಟ್ಟು ಹೀನಾವಸ್ಥೆಯನ್ನು ವ್ಯಂಜಿಸಿದೆ. ಇಂದಿಗೂ ಸಹ ಆಯ್ದು ಶೇಖರಿಸಿಟ್ಟಿದ್ದ ಬಿತ್ತನೆ ಬೀಜ ಬಿತ್ತಿಯಾದಮೇಲೆ ಮಳೆ ಬೀಳದೆ, ಮೊಳಕೆಯೊಡೆಯದಾದಾಗ ರೈತ ತತ್ತರಿಸಿ ಹೋಗುತ್ತಾನೆ. 'ಬಿತ್ತಿದ್ದಾಯಿತು। ಉತ್ತಿಹ ಮಣ್ಣು' ಎಂದು ಕಾಳು ಮಣ್ಣಾಗಿ ಹೋದುದಕ್ಕೆ ನೊಂದಿದ್ದಾನೆ. ಮತ್ತೆ ನೆಲ ಮುಗಿಲನ್ನೇನಂಬಿ ಕಾದಿದ್ದಾನೆ.

ಅವನಿಗೆ ಮತ್ತು ಅವನ ಹೆಂಡತಿ ಮಕ್ಕಳಿಗೆ ಹೊಟ್ಟೆತುಂಬ ಕೂಳಿಲ್ಲ. ಅವನ ಪ್ರಾಣದ ಉಳಿವು ಇರುವುದೆಂದರೆ 'ಉಸಿರಿನ ಕೂಳಿಗೆ। ಕಂಬನಿ ನೀರು' ! ಅವನು ದಿನ ನಿತ್ಯದ ಬದುಕಿನ ಚಿಂತೆಯಿಂದ ಸಾಲದ ಶೂಲದಿಂದ ಸಾವು ಬಂದರೆ ಸಾಕೆಂದು ಯಮನ ಕರುಣೆಗಾಗಿ ಕಾದಿದ್ದಾನೆ.

ಕೊರಳಿಗೆ ಹತ್ತಿದೆ
ಸಾಲದ ಶೂಲ!
ಆದರು ಬರದೋ

ಯಮನಿಗೆ ಕರುಣ
ಉಸಿರಿಗೆ ಒಮ್ಮೆ
ಜನನಾ ಮರಣಾ.

ಆ ಘೋರವಾಸ್ತವದಲ್ಲಿ ಅವನ ಶರೀರ ಹೇಗಿದೆ ಎಂಬ ಚಿತ್ರಣವನ್ನು, ಅವನು ಸಾವಿಗಾಗಿ ಆಶಿಸುವುದನ್ನು ಮೂರನೇ ನುಡಿ ನೋವಿನ ಪಸೆಯಲ್ಲಿ ನೀಡಿದೆ. ಅದರ ವಿವರ ಗದ್ಯದಲ್ಲಿ ನೀಡಿದರೆ ಆರ್ದ್ರತೆ ಆರಿಹೋದೀತು.

'ನರಗಳ ನೂಲಿನ
ಪರೆ ಪರೆ ಚೀಲಾ
ತೆರೆ ತೆರೆಯಾಗಿದೆ
ಜಿರಿಜಿರಿಯಾಗಿದೆ
ಅದರೊಳಗೊಂದು
ಎಲುವಿನ ಬಲೆಯು!'

ಆ ರೈತನಿಗೆ ಜೀವವಿರುವ ಜನುಮ ಕತ್ತಲೆಯಾಗಿದೆ; ಸಾವು ಬೆಳಕಾಗಿದೆ ಎಂಬ ಬೇಂದ್ರೆ ನುಡಿಯಲ್ಲಿ ಕಾಲದೇಶಾತೀತವಾದ ರೈತನ ಹೀನಾಯ ಬದುಕು ಚಿತ್ರಿತವಾಗಿದೆ. ೧೯೩೯ರಲ್ಲಿ ಬರೆದ ಕವನ ಇಂದಿಗೂ ಸತ್ಯವಾಗಿದ್ದು, ಇಂದಿಗೂ ಪ್ರಸ್ತುತವಾಗಿರುವುದು ಕವಿಯ ತೀವ್ರ ಸಾಮಾಜಿಕಪ್ರಜ್ಞೆಗೆ ಸಾಕ್ಷಿಯಾಗಿದೆ. ಯಾರೇ ಆಳಿದರೂ, ಏನೇ ಬದಲಾವಣೆಯ ಗಾಳಿ ಬೀಸಿದರೂ ರೈತನನ್ನು ಪ್ರಕೃತಿಯೇ ಪೊರೆಯ ಬೇಕಾಗಿದೆ. ಅವನನ್ನು ಪೊರೆವ ಪ್ರಕೃತಿಯಿಂದ ಜಗ ಸುರಕ್ಷಿತ ಎಂಬ ಧ್ವನಿ ಈ ಕಾವ್ಯದಲ್ಲಿದೆ. ಇದೊಂದು ರೈತನ ನೋವಿನ ಗಾಥೆ.

ಜನುಮವೆಂಬುವಾ
ಕತ್ತಲೆಯಲ್ಲಿ
ಬಿದ್ದಿದೆ ಒಳಗೆ
ಹೇಗೋ ಬಂದು!
ಸಾವಿನ ಬೆಳಕದು
ಕಾಣುವದೆಂದು?
ಎಂದೋ ಎಂದೋ
ಎಂದೋ ಎಂದು
ಕನವರಿಸುವದು
ತಳಮಳಿಸುವದು!

## II ಮನುವಿನ ಮಕ್ಕಳು

ಪ್ರಕೃತಿಯಲ್ಲಿರುವ ಗಾಳಿ, ಬೆಳಕು, ನೀರು, ಆಹಾರ ಮುಂತಾದವು ಎಲ್ಲ ಜೀವಕೋಟಿಗಳಿಗೂ ಸಮೃದ್ಧವಾಗಿ ದೊರಕುವಷ್ಟಿದೆ. ಆದರೆ ಮನುಷ್ಯರು ಸ್ವಾರ್ಥ, ದುರಾಸೆಯ ಸಂಗ್ರಹಣ ಗುಣದಿಂದ ಕೃತಕ ಕೊರತೆಯನ್ನುಂಟು ಮಾಡುತ್ತಿದ್ದಾರೆ. ಈ ಪೃಥ್ವಿಯಲ್ಲಿ ಸಾಧು ಪಶು ಪಕ್ಷಿಗಳಿಗೆ ಕ್ರೂರ ಜಂತುಗಳು ಹೊಂಚುಹಾಕುತ್ತಿದ್ದರೆ, ಮನುಷ್ಯ ಮನುಷ್ಯನನ್ನೇ ಶೋಷಿಸುತ್ತಿದ್ದಾನೆ. ಅದನ್ನು ಧರ್ಮದ ವೇದಾಂತದ ಹೆಸರಿನಲ್ಲಿ ಪೋಷಿಸಿಕೊಂಡು ಬರುತ್ತಿದ್ದಾನೆ! ದೇವರ ಅವತಾರಗಳು ಹೇಡಿತನದ ಸಂಕೇತವಾಗಿವೆ. ಪ್ರತಿಯೊಬ್ಬ ವ್ಯಕ್ತಿಯು ತನ್ನ ಅರಿವನ್ನು ಜಾಗೃತಗೊಳಿಸಿಕೊಂಡು ಅದೇ ದೈವವೆಂದು ಎಚ್ಚರಗೊಳ್ಳಬೇಕು. ಅದೊಂದೇ ಈ ಎಲ್ಲ ಸಮಸ್ಯೆಗಳಿಗೆ ಪರಿಹಾರ. ಆ 'ಜೀವ ದೇವನೇ ಮೈವೆತ್ತು' ಬರಬೇಕಾಗಿದೆ ಎಂಬ ಚಿಂತನೆಯನ್ನು ಬೇಂದ್ರೆ ನೀಡಿದ್ದಾರೆ. ಎಷ್ಟೇ ಕ್ರೂರ, ನಿರಾಶಾವಾತಾರಣವಿದ್ದರೂ ಅದನ್ನು ಮೆಟ್ಟಿನಿಲ್ಲುವ ಆಶಾವಾದ ಬೇಂದ್ರೆಯವರ ಕಾವ್ಯದಲ್ಲಿದೆ.

ನಾಲ್ಕು ಸಾಲಿನ ಹನ್ನೆರಡು ನುಡಿಗಳ ಈ ಕವನದ ಮೊದಲ ಮೂರು ನುಡಿಗಳಲ್ಲಿ ಅಮೂರ್ತಚೇತನಗಳ ಜೀವಂತಿಕೆ ಮತ್ತು ಮೂರ್ತ ಮಾನವನ ಜಡತ್ವ ಮುಖಾಮುಖಿಯಾಗಿದೆ. ಗಾಳಿ ತನ್ನ ಜೀವಂತಿಕೆಯಿಂದ ಸುಳಿಸುಳಿ ಸೂಸಿ ಜೋರಾಗಿ ಬೀಸುತ್ತಿದ್ದರೆ; ಮನುಷ್ಯನ ಪ್ರಾಣತರಂಗಿಣಿ ದುಡುಕುತ್ತಿದೆ. ಹೂಗಂಪಿನ ಹುಡಿ ಚಲನಶೀಲತೆಯಿಂದ ಮಿಸುಕಾಡಿ ಗಾಳಿಯೊಡನೆ ಗಮಗುಟ್ಟುತ್ತ ಮುಸುಕುತ್ತಿದ್ದರೆ; ಮನುಷ್ಯ ಮನುಷ್ಯರು ಬಾಳಿನ ಉಲಿತ ಕೇಳಲು ಕಿವಿಯಿಲ್ಲವಾಗಿ ಸಂವಹನ ಗೊಳ್ಳದಿದ್ದಾರೆ. ಬೆಳುದಿಂಗಳು, ಬಿಸಿಲು ರಸಾನಂದವನ್ನುಂಟುಮಾಡಿ ಕಂಗೊಳಿಸುತ್ತಿದ್ದರೆ; ಮನುಜ ಅದರ ಸವಿಯನ್ನು ಅನುಭವಿಸಲಾಗದೆ ಅಸ್ವಸ್ಥ ಸ್ಥಿತಿಯಲ್ಲಿದ್ದಾನೆ. ಈ ಜಗದ ಜೀವಿ ಸ್ವಪ್ರಕಾಶದ ಸೂರ್ಯನಲ್ಲ, ಅವನು ಇನ್ನೊಂದನ್ನು ಬೆಳಗಿಸಲಾರ ನಿಜ. ಆದರೆ ಅಮೂರ್ತ ಚೇತನಗಳಲ್ಲಿರುವ ಹೊಂದಾಣಿಕೆಯನ್ನು ತನ್ನ ಜೀವರಲ್ಲಿ ಕಾಣದ ಅವನು ಕಲ್ಲಿಗೂ ಕಡೆಯಾಗಿದ್ದಾನೆ.

ಮುಂದಿನ ಮೂರು ನುಡಿಗಳಲ್ಲಿ ಪ್ರಾಣಿ ಸಹಜ ಹಿಂಸೆ, ವೈರತ್ವ, ಕೊಂದು ತಿನ್ನುವ ಕ್ರೌರ್ಯದ ಚಿತ್ರಣವಿದೆ. ಜೋಡಿ ಪಾರಿವಾಳವನ್ನು ಕಬಳಿಸುವ ಗಿಡಗ, ನಿರುಪದ್ರವಿ ಗೋವಿನ ಸಾವಿಗೆ ಕಾದ ಸಿಂಹ ಮುಂತಾದ ಪಕ್ಷಿ ಪ್ರಾಣಿಗಳಲ್ಲಿ ಕ್ರೂರಿಯಾದುದರದೇ ಮೇಲುಗೈ. ಹೊಲಸಾದುದು, ಕ್ಷುದ್ರವಾದುದರ ಕಡೆಗೆ ಹದ್ದಿನ ಲಕ್ಷ್ಯ, ಪ್ರಾಣಿಗಳಿಗೆ ಅದು ಸಹಜ.

ಆದರೆ ವಿವೇಕಶಾಲಿಯಾದ ಮನುಷ್ಯ ತನ್ನ ಜನರನ್ನು ದ್ವೇಷ, ಅಸೂಯೆ, ಹಿಂಸೆಯಿಂದ ಮುಕ್ತರನ್ನಾಗಿಸಿ ಅವರನ್ನು ಪ್ರಾಣಿ ಸಹಜ ನಿಮ್ನಸ್ತರದ ವರ್ತನೆಯಿಂದ ಉನ್ನತ ನೆಲೆಗೆ ಕೊಂಡೊಯ್ಯಬೇಕಾಗಿದೆ. ಅದಕ್ಕಾಗಿ ನಮ್ಮ ಪುರಾಣ ಕಥೆಗಳ ಶಿಬಿ, ದಿಲೀಪ, ಜೀಮೂತವಾಹನರು ಪ್ರಾಣಿಗಳ ಕ್ರೂರತನ ಮನುಷ್ಯನಲ್ಲಿರಬಾರದೆಂದು ಮೃದು ಪ್ರಾಣಿಗಳ ರಕ್ಷಣೆಗಾಗಿ ತಮ್ಮನ್ನೇ ಕ್ರೂರ ಪ್ರಾಣಿಗಳಿಗೆ ಬಲಿಯಾಗಿ ನೀಡಿದರು. ಅಂಥಹ ಶ್ರೇಷ್ಠ ತತ್ವದ ಮಿಥ್ ಅನ್ನು ನಮ್ಮ ಭಾರತೀಯ ಮನುಷ್ಯ ಚಿಂತಿಸಿರುವುದು ಜಗದ ಆಶ್ಚರ್ಯ! ಅಂಥಹ ಶ್ರೇಷ್ಠ ಮಾನವತ್ವದ ಅರಿವನ್ನು ಬಿತ್ತಿದ ನಾಡಿನಲ್ಲಿ ಇಂದು ಮನುಷ್ಯ ಮನುಷ್ಯರ ನಡುವಿನ ಅಮಾನವೀಯ ವರ್ತನೆಗಳನ್ನು ಕಂಡು ಸ್ವರ್ಗದ ಶಿಬಿ, ದಿಲೀಪ, ಜೀಮೂತವಾಹನರು ದುಃಖಿಸುತ್ತಿದ್ದಾರೆ.

'ಸ್ವರ್ಗದೊಳಿದ್ದೂ ಸಂಶಯ ಬಂದಿತು
ಕಣ್ಗಳ ತಿಕ್ಕಿದರು.
ತಮ್ಮ ನಾಡಿನಲಿ ನಡೆದಿಹ ಲೀಲೆಯ
ನೋಡುತ ಬಿಕ್ಕಿದರು.'

ಈ ನೆಲದಲ್ಲಿ ಮನುಷ್ಯನಿಂದ ಉಂಟಾದ ಕ್ರೂರ ವಾತಾವರಣ ಮಿಕ್ಕ ಮೂರು ನುಡಿಯಲ್ಲಿದೆ. ಈ ಜಗತ್ತಿನಲ್ಲಿ ಮನುಷ್ಯ ಮನುಷ್ಯರ ನಡುವೆ ನಡೆಯುವ ಶೋಷಣೆಯಂತಹದು ಯಾವ ಪ್ರಾಣಿವರ್ಗದಲ್ಲಿಯೂ ಇಲ್ಲ. ಮನುಷ್ಯನ ಭೌತಿಕ ಸಂಪತ್ತಿನ ಸೃಷ್ಟಿಯಲ್ಲಿ ಕೂಲಿ ಕಾರ್ಮಿಕರ, ದೀನ ದಲಿತರ ದುಡಿಮೆಯದೇ ಸಿಂಹಪಾಲು. ಅವರ ಅಂದಂದಿನ ದುಡಿಮೆಯ ಫಲ ಅಂದಂದಿನ ಹೊಟ್ಟೆ ಹೊರೆಯುವಷ್ಟಾಗಿದೆ. ಅವರು ಜೀವಕ್ಕೆ ದಣಿವಿಲ್ಲದಂತೆ ದುಡಿದು ತೃಪ್ತಿ ಕಾಣದವರಾಗಿದ್ದರೆ, ಮುಂದಿನ ಜನಾಂಗವಾಗುವ ಮಕ್ಕಳು ಕಳೆಯಿಲ್ಲದೆ ಸೊರಗಿದ್ದಾರೆ. ಬಡವರ ಕೂಸುಗಳ ಕಡೆ ಯಾರಗಮನವೂ ಇಲ್ಲದ್ದು ಕಂಡಾಗ ಕವಿ ವ್ಯಂಗ್ಯದ ಅತಿರೇಕದಲ್ಲಿ ಧ್ವನಿ ಎತ್ತಿದ್ದಾರೆ: 'ಭೂಮಿಗೆ ಬೆಳೆಯಿಲ್ಲ.'

ಸಮೃದ್ಧಿ ಇರುವ ಈ ಜಗದಲ್ಲಿ ಸಂಗ್ರಹಣಾ ದಾಹದ ಸಿರಿವಂತರು ಬೆಳೆಯಿದ್ದರೂ ಕೃತಕ ಕೊರತೆಯನ್ನುಂಟು ಮಾಡಿ; ದುಡಿವವರನ್ನು ಅವರ ಮಕ್ಕಳನ್ನು ಶೋಷಿಸಿದ್ದಾರೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯನ್ನು ಶೋಷಿಸಿ, ಹಿಂಸಿಸಿ ಅವಳ ಸ್ವಾತಂತ್ರ್ಯ ಹರಣಗೊಳಿಸಿ ಅವಳ ನೋವು ನಿರಂತರವಾಗಿರುವಂತೆ ಮಾಡಿದ್ದಾರೆ. ಜೀವಿಗಳ ಸೃಷ್ಟಿ ಚೇತನವಾದ ಸ್ತ್ರೀಗೆ ಸಮಾನತೆ ಕೊಡದ ಪುರುಷನ ಕ್ರೌರ್ಯವನ್ನು ಕವಿ 'ಗಂಡಿಗೆ ಬಿಡುವಿಲ್ಲ' ಎಂಬ ವ್ಯಂಗ್ಯ ನುಡಿಯಲ್ಲಿ ಚಿತ್ರಿಸಿದ್ದಾರೆ. ಸ್ವಾರ್ಥದಾಹದ ಆಕ್ಟೋಪಸ್ ಹಿಡಿತದಿಂದ ಉಂಟಾದ ಯುದ್ಧವು ಭೀಕರತೆಯನ್ನು ಸಾರುತ್ತಿದೆ. ಹಸಿವೆಯ ಕೂಗು ಕಹಳೆಯಂತೆ ಮೊಳಗುತ್ತಿದೆ. ಅದನ್ನು ಕೇಳಿದ ಜೀವ ನಡುಗುತ್ತಿದೆ.

ತಾಮಸ ಗುಣದ ಜನರ ಅನ್ಯಾಯ, ಕ್ರೌರ್ಯ, ಹಿಂಸೆ ಶೋಷಣೆಯಿಂದ ತುಳಿತಕ್ಕೆ ಒಳಗಾಗಿ ಹಸಿವಿನಿಂದ ಸಾಯುವ ಜನರ ಎದೆಯ ಒರಲಾಟವು ನಗಾರಿಯ ಬಡಿತದಂತಿದೆ. ಅದನ್ನು ಕೇಳಿದ ಸಾತ್ವಿಕ ಜೀವಿ ಅದನ್ನು ಎದುರಿಸಲಾಗದೆ ದಿಕ್ಕೆಟ್ಟು ಓಡಿದ್ದಾನೆ. ಮನುವಿನ ಮಕ್ಕಳು ಒಬ್ಬರಿಗೊಬ್ಬರು ಬೇಟೆಯಾಡುವ ನಿರ್ದಯ ವರ್ತನೆಯನ್ನು ಕಂಡು ಆ ಸಾತ್ವಿಕ ಜೀವಿ ತನ್ನಲ್ಲಿ ತಾನೇ ಅಡಗಿ ಹೋಗಿದ್ದಾನೆ.

ವ್ಯವಸ್ಥೆಯನ್ನು ತಮ್ಮ ಕೈಯಲ್ಲಿ ಹಿಡಿದುಕೊಂಡ ಪಟ್ಟಭದ್ರ ಹಿತಾಸಕ್ತಿಗಳು ಹಗರಣಗಳನ್ನು ಸೃಷ್ಟಿಸಿ, ಅವುಗಳನ್ನು ಮುಚ್ಚಿ ತಮ್ಮ ಲಾಭವನ್ನೇ ದೃಷ್ಟಿಯಲ್ಲಿಟ್ಟುಕೊಂಡು 'ಧರ್ಮಃ' ಎಂದು ಕೂಗುಹಾಕಿದ್ದಾರೆ. ಅವು ಸೋಗಿನ ಕೂಗುಗಳು. ಮಾನವಧರ್ಮ, ಮಾನವತಾವಾದವೇ ಬೇರೆ. ಹಾಗಾಗಿ ಆ ಕೂಗಿಗೆ ಕಿವಿಗೊಡಬೇಡಿ. ಜನಸಾಮಾನ್ಯರ ಸತ್ತ್ವವೆ 'ಜೀವ ದೇವ'. ಅದು ಮೈಕೊಡವಿ ಎಚ್ಚೆತ್ತು ತಲೆಯೆತ್ತಬೇಕಾಗಿದೆ. ವೇದಾಂತಿಯು ಹೇಳುವ ಇಲ್ಲದ ದೈವಕ್ಕೆ ಶರಣಾಗುವ; ಇರುವ ವಾಸ್ತವವನ್ನು ಎದುರಿಸಲಾಗದ ವರ್ತನೆಗೆ ಕನಿಕರ ಹುಟ್ಟುತ್ತಿದೆ ಎಂದು ಬೂಟಾಟಿಕೆ ಧರ್ಮವನ್ನು, ವೇದಾಂತಿಯನ್ನು ತೀವ್ರವಾಗಿ ಬೇಂದ್ರೆ ಖಂಡಿಸಿದ್ದಾರೆ.

'ಜೀವದೇವನೇ ಮೈವೆತ್ತು
ನೀನೆ ತಲೆಯೆತ್ತು
ವೇದಾಂತಿಯ ಮೂಕ ಮುದ್ರೆಯ ನೋಡಿ
ಕನಿಕರ ಹುಟ್ಟುವದು.'

ಪ್ರಜ್ಞೆಯನ್ನು ಜಾಗೃತಗೊಳಿಸುವದು ಸತ್ತ್ವಗುಣ. ಅದನ್ನು ಕ್ರಿಯಾಶೀಲ ಗೊಳಿಸುವದು ರಜಸ್; ಅದನ್ನು ಮುಸುಕಿನಲ್ಲಿಡುವದು ತಮಸ್. ಹಾಗಾಗಿ ಆ ಸತ್ತ್ವಗುಣದ 'ಜೀವದೇವ' ಮೈವೆತ್ತು ಬರಲಿ ಎಂದು ಆಶಿಸಿದ್ದಾರೆ.

ಧರ್ಮದ ಹೆಸರಿನಿಂದ ಸೃಷ್ಟಿಯಾಗಿರುವ ಹತ್ತು ಅವತಾರಗಳು ಹೇಡಿತನದ್ದಾಗಿವೆ. ಅದನ್ನು ವಾಸ್ತವ ನೆಲೆಯಲ್ಲಿ ಚಿಂತಿಸಿದ ಮನಸ್ಸು ಗೊಣಗುಟ್ಟುತ್ತ ಆ ಕಲ್ಪನೆಯನ್ನು ದೂರುತ್ತಿದೆ. ಮನುವಿನ ಮಕ್ಕಳ ಈ ದ್ವೇಷ, ಅಸೂಯೆ, ಕ್ರೌರ್ಯದ ನಡೆಯಿಂದ ಈ ನೆಲದಲ್ಲಿ ಹೊಟ್ಟೆತುಂಬಿದ – ಹೊಟ್ಟೆಗಿಲ್ಲದ; ಆಳುವವರ–ಆಳುಗಳ; ಸಿರಿವಂತರ–ಬಡವರ; ಶೋಷಕರ–ಶೋಷಣೆಗೆ ಒಳಗಾದವರ ರೀತಿ 'ಗಾಳಿಗೆ ಗಾಳಿಯು ಬಯಲಿಗೆ ಬಯಲು' ರೂಪಕದಲ್ಲಿ ಚಿತ್ರಿತವಾಗಿದೆ. ಮನುಷ್ಯರ ನಡುವಿನ ಈ ಬೇಟೆಯಿಂದ ತಲೆ ರಣಗುಟ್ಟಿದೆ. ಕವಿ ಸಾತ್ವಿಕ ವ್ಯಕ್ತಿಯ 'ಜೀವದೇವ' ಮೈವೆತ್ತು ಬರುವ ಆಶಾಭಾವನೆಯಿಂದಿರುವುದು ಈ ಕವನದ ಭರವಸೆಯ ಕಿರಣವಾಗಿದೆ. ಅದಕ್ಕಾಗಿ

'ಜೀವದೇವ'ನ ಲಕ್ಷಣಉಳ್ಳ ಮಾನವರು ನಾವಾಗಬೇಕು ಎಂದಿದ್ದಾರೆ. ಇದು ಬೇಂದ್ರೆಯವರ ಧರ್ಮನಿರಪೇಕ್ಷವಾದ, ಮಾನವತಾವಾದದ, ಮಾನವಧರ್ಮದ ಉತ್ತಮ ಕವನ. (ರಚನೆ : ೨೮.೧೧.೧೯೨೭. ಮುಗದ)

## III ಯಜ್ಞ

ಅನ್ನದೇವನನ್ನು ಪೂಜಿಸುವ, ಪ್ರಾರ್ಥಿಸುವ ಯಜ್ಞ ಕವನ (ರಚನೆ : ೨೯.೧೦.೧೯೩೩, ರಾತ್ರಿ ೩ ಗಂಟೆ, ಮುಗದ)ವು ಅನ್ನ, ಪ್ರಾಣ; ಜೀವ, ಸಾವು; ಕತ್ತಲು, ಬೆಳಕಿನ ಗುಣಲಕ್ಷಣಗಳನ್ನು ಚಿತ್ರಿಸಿದೆ. ಮನುಷ್ಯರ ಪರಸ್ಪರ ಬೇಟೆಯ ಕ್ರೌರ್ಯಕ್ಕೆ ಅನ್ನವೇ ಕಾರಣವಾಗಿದ್ದು, ಅನ್ನದ ಮಹತ್ತನ್ನು ತಿಳಿದು ಮಾನವನೇಕೆ ಮಾನವನಾಗಿ ವರ್ತಿಸುತ್ತಿಲ್ಲ ಎಂಬ ಪ್ರಶ್ನೆ ಇಲ್ಲಿದೆ. ಈ ಕವನದ ಭಾವಸಂದರ್ಭ: 'ಅನ್ನಕ್ಕೂ ಪ್ರಾಣಕ್ಕೂ ಇರುವ ನಿಕಟಸಂಬಂಧವನ್ನು ಅರಿತೇ, ಮನುಷ್ಯ ಮನುಷ್ಯನನ್ನು ಕಾಡುವ ದೌರ್ಜನ್ಯದ ಮಾರ್ಗವನ್ನು ಕಂಡುಕೊಂಡಿದ್ದಾನೆ. ಅನ್ನವನ್ನು ನಾಶಗೊಳಿಸುವ ಅಪಚಾರ, ಅಪಚಾರಿಗಳ ಪ್ರಾಣಕ್ಕೆ ಮುಳುವು. ಅನ್ನಕ್ಕೆ ಮಾಡಿದ ಅನ್ಯಾಯ ಪ್ರಾಣಕ್ಕೇ ಮಾಡಿದ ಅನ್ಯಾಯ. ಪ್ರಾಣವು ವಿದ್ಯುತ್ತಿಗೂ ಮಹತ್ತರವಾದ ದಾಹಕ ಪ್ರಕಾಶಕ ಶಕ್ತಿಯನ್ನು ಒಳಗೊಂಡಿದೆ. ಪ್ರಾಣದ ಆ ಪ್ರಕಾಶಕ ಶಕ್ತಿಯ ಉಪಾಸನೆಯನ್ನು ನಾವು ಮಾಡೋಣ. ಅನ್ನದ ಸ್ವಾಮಿತ್ವ ಅದರದು. ಈ ಅಜ್ಞಾನವನ್ನು ಹೊಡೆದು ಹಾಕಲು ಈ ಅರಿವಿನ ಅವತಾರವಾಗಬೇಕು' ಎಂದಿದೆ. ಆದರೆ ಕವನ ಈ ಗದ್ಯದ ನುಡಿಯಷ್ಟು ಸರಳವಾಗಿಲ್ಲ. ಅದು ಕಾವ್ಯದ ನೆಲೆಯಿಂದ ಅನ್ನದ ಶೋಧಕ್ಕೆ ತೊಡಗಿರುವುದರಿಂದ ಅದರ ಅಂತರ್ಯವನ್ನು ತಿಳಿಯುವುದು ಅಷ್ಟು ಸುಲಭವಲ್ಲ.

ಈ ಕವನದ ಮೊದಲ ಭಾಗದಲ್ಲಿ ಬೇಂದ್ರೆಯವರು ಈ ದೇಹವೆಂಬ ಯಜ್ಞಕುಂಡದ ಚಿತ್ರವನ್ನು ನೀಡಿದ್ದಾರೆ. ದೇಹದ ಸಾವನ್ನು ದೂರೀಕರಿಸಲು ಹಸಿವನ್ನು ಕಳೆಯಬೇಕಾಗಿದೆ. ಅದಕ್ಕಾಗಿ ದೇಹ ಯಜ್ಞಕುಂಡದಂತೆ ಧಗಧಗಿಸುವ ಆಸೆಯಿಂದ ಬಾಯಿ ತೆರೆದುಕೊಂಡಿದೆ. ಆ ಕೆಂಡದಂಥ ಕೊಂಡಕ್ಕೆ ಹಾಕುವ ಕೂಳು ಅನ್ನವು ಕಾಡ ಉರುವಲಂತೆ ಇದ್ದು, ಅದು ಹೊಗೆ ಹಾಗೂ ಧಗೆಯನ್ನು ಹುಟ್ಟಿಸುತ್ತದೆ. 'ಉರಿಯನ್ನು ಅಟ್ಟಿಸುತ್ತಿದೆ' ಅಂದರೆ ಈ ಜಗದ ಜನರ ದೇಹದ ಯಜ್ಞಕುಂಡಕ್ಕೆ ತೃಪ್ತಿಯಾಗುವಷ್ಟು ಅನ್ನಸಿಗುತ್ತಿಲ್ಲ ಎಂಬ ಭಾವವನ್ನು ಈ ನುಡಿ ಧ್ವನಿಸುತ್ತಿದೆ. ಹಾಗಾಗಿ ಜನಬಳಕೆಯ 'ಕೈಯತುತ್ತು ಬಾಯಿಗಿಲ್ಲ' ಎಂಬ ಮಾತು ಸುಳ್ಳಾಗಿ ಈ ಜಗದಲ್ಲಿ 'ಬಾಯಿಗಿದ್ದು ಹೊಟ್ಟೆಗಿಲ್ಲ' ಎಂಬ ಹೊಸ ಮಾತು ಸತ್ಯವಾಗಿದೆ. ಯಜ್ಞದ ಪ್ರತಿಮೆಯಲ್ಲಿ ದೇಹ, ಪ್ರಾಣ, ಅನ್ನದ ಸಂಬಂಧವನ್ನು ನೀಡಿದ್ದಾರೆ.

ಪ್ರಾಣವನ್ನು ಬಲಿಪಶು ಮಾಡಿಕೊಳ್ಳಲು ಸಾವಿಗೆ ಸಾಧ್ಯವಿಲ್ಲ. ಆ ಜಂಭ ಅದಕ್ಕಿದ್ದರೆ ಅದು ತಪ್ಪು. ಪ್ರಾಣವೆಂಬುದು ಬೆಂಕಿಯಿಂದ ಕಾದಂತಹ ಹಂಚು. ಅದರಲ್ಲಿ 'ಹುರಿದ ಅರಳು ಸಾವು ಗೀವು'. ಸಾವು ಎಂಬುದು ಪ್ರಾಣದ ಹಂಚಿನಲ್ಲಿ ಹೊಸರೂಪ ಪಡೆದು ಸವಿಯಾಗಿ ಬಾಯಿಯ ಚಪ್ಪರಿಕೆಗೆ ಅರಳಾಗಿ ಹೋಗುತ್ತದೆ. ಪ್ರಾಣವು ಸಾವಿನ ಬೆದರಿಕೆಗೆ ಭಯಪಟ್ಟುಸಾಯಲು 'ಪುಕ್ಕ ಹಕ್ಕಿಯಲ್ಲ' ಎಂದು ಪ್ರತಿಮಾತ್ಮಕವಾಗಿ ಬಣ್ಣಿಸಿದ್ದಾರೆ.

ಪ್ರಾಣ ಹೊತ್ತ ಈ ದೇಹಕ್ಕೆ ಅನ್ನದೊರಕುತ್ತಿದ್ದ ಹಾಗೆ ವ್ಯಕ್ತಿಯ ಚೈತನ್ಯವಾದ ಪ್ರಾಣಶಕ್ತಿ, ತನ್ನ ಹಲವುರಂಗಿನಲ್ಲಿ ತಾಳ ಹಾಕಿ ದಣಿವರಿಯದೆ ಕುಣಿಯುತ್ತದೆ. ಅಗ್ನಿಯು ಕರಾಳಿ, ಧೂಮಿನಿ, ಶ್ವೇತಾ, ಲೋಹಿತಾ, ನೀಲಲೋಹಿತಾ, ಸುವರ್ಣ, ಪದ್ಮರಾಗ ಎಂಬ ಏಳು ನಾಲಿಗೆಯಿಂದ ವ್ಯೋಮವನ್ನು ವ್ಯಾಪಿಸಿದಂತೆ ಅನ್ನದಿಂದ ಪ್ರಾಣವು ಹದಿನಾಲ್ಕು ಲೋಕಗಳನ್ನು ಸುತ್ತುವ ಶಕ್ತಿ ಪಡೆದಿದೆ.

'ಪ್ರಾಣದುಸಿರು ಗಾಳಿ ತನ್ನ
ಏಳು ತಾಳ ಹಾಕುತಿರಲು
ಸುತ್ತು ಹತ್ತು ನಾಲ್ಕು ಲೋಕ
ದಣಿವರಿಯದೆ ಕುಣಿಯುತಿಹವು.'

ಎರಡನೆಯ ಭಾಗದಲ್ಲಿ ಬೇಂದ್ರೆಯವರು ಅನ್ನದ ಮೂಲ ಶಕ್ತಿಯಾದ ಬೆಳಕು, ಪ್ರಕಾಶವನ್ನು ತಿಳಿಸುತ್ತಾ; ಅದರಿಂದ ಪೋಷಿತವಾದ ಪ್ರಾಣದ ದಾಹಕ ಪ್ರಕಾಶಕ ಚೇತನವನ್ನು ವರ್ಣಿಸಿದ್ದಾರೆ. ಅಂತಹ ಪ್ರಾಣಪೋಷಕವಾದುದನ್ನು ಸರ್ವರಿಗೂ ಸಮನಾಗಿ ದೊರಕದಂತಹ ವ್ಯವಸ್ಥೆಯ ಹಿಡಿತ ಸಾಧಿಸಿದವರನ್ನು ಛೇಡಿಸಿದ್ದಾರೆ.

ವ್ಯಕ್ತಿ ಪ್ರಕೃತಿಯ ಕೊಡುಗೆ. ಅವನು 'ಬೆಳಕಿನಿಂದ ಬೆಳೆದು ಬಂದ'ವನು. ಅವನಿಗೆ ಅದೇ ಪ್ರಕೃತಿಯ ಫಲವಾದ ಅನ್ನ ದೊರಕದಿರುವುದು 'ಬೆಳೆಯತುತ್ತು ಬೆಳಕಿಗಿಲ್ಲೆ?' ಎಂಬ ಪ್ರಶ್ನೆ ಕವಿಯನ್ನು ಕಾಡಿದೆ. ಈ ಜಗದ ದುರಾಶೆಯ, ಬಂಡವಾಳಷಾಹಿ ಶೋಷಕವರ್ಗ ಎಲ್ಲವನ್ನು ತಮ್ಮ ದಾಹದ ಕಣ್ಣಿಂದ ವಶಪಡಿಸಿಕೊಂಡಿದೆ. ಅದು ಸರಿಯಲ್ಲ. ನಿಮ್ಮ ನಿಮ್ಮ ಬಾಯಿ ತೆರೆದು ನಿಮಗೆ ಬೇಕಾದಷ್ಟು ಉಣ್ಣಿರಿ. ಹಣೆಯ ಕಣ್ಣು ತೆರೆದು ಇತರರ ಎಲ್ಲವನ್ನೂ, ಎಲ್ಲದರನ್ನೂ ಕಬಳಿಸಬೇಡಿ.

ಅನ್ನ ಪ್ರಾಣದ ಬೆಳಕು. ಅದೇ ಪ್ರಕಾಶ, ಜ್ಞಾನ, ತೇಜ. ಅದನ್ನು ನಿನಗೆ ಎಷ್ಟು ಬೇಕೊ ಅಷ್ಟು ತಿನ್ನು. ಸಂಗ್ರಹಣ ಗುಣ ಬಿಡು. ಇತರರ ಜೀವ ಪೋಷಕವಾದ, ಪ್ರಕಾಶ ಜ್ಞಾನಕ್ಕೆ ಕಾರಣವಾದ ಅನ್ನವನ್ನು ಸಂಗ್ರಹಿಸಿಡಬೇಡ. ಇತರರದು ಆಗ

ಬೇಕಾದುದನ್ನು ನಿನ್ನ ಕಣ್ಣಿಂದ ಕಬಳಿಸಬೇಡ. ನೀನು ಬೆಳಕಾಗು, ಮಾನವನಾಗು. ಇತರರನ್ನು ಉಳಿಸಿ ಬೆಳೆಸು, ಬೆಳಗಿಸು ಎಂಬ ವಿಶ್ವತತ್ವವನ್ನು ಸಾರಿದ್ದಾರೆ.

'ಬೆಳಕ ನುಂಗಿ ನೀರು ಕುಡಿದು
ಬೆಳೆಯ ತಿಂದು ತೇಗು ತೇಗು.'

ನಿನ್ನ ಮಿತಿಯನ್ನು ನೀನು ತಿಳಿದುಕೊ. ಜಗದ ಬೆಳಕಾದ ಅನ್ನವನ್ನು ನಿನ್ನ ಅಳತೆಗೆಷ್ಟು ಬೇಕೋ ಅಷ್ಟನ್ನು ತಿಂದು ಆರೋಗ್ಯವಂತನಾಗಿ ಬದುಕು. 'ನಿನ್ನ ತುತ್ತು ನಿನಗೆ ದಕ್ಕು'. ಜಗತ್ತಿನ ಎಲ್ಲವೂ ನನ್ನದಾಗಬೇಕು, ಇತರರಿಗೆ ಯಾವುದೂ ಸಿಗಬಾರದು ಎಂಬ ನೀಚತನವನ್ನು ಬೇಂದ್ರೆಯವರು ಮೀನು ಮೊಸಳೆಗಳ ಪ್ರತಿಮೆಯಲ್ಲಿ ನೀಡಿದ್ದಾರೆ. ಪ್ರಕೃತಿಯ ಎಲ್ಲವನ್ನೂ ಮೀನ ಮೊಸಳೆಯ ಗುಣದವರೇ ಕಬಳಿಸಲು ಸಾಧ್ಯವಿಲ್ಲ ಎಂಬ ಧ್ವನಿಯನ್ನೂ ನೀಡಿದ್ದಾರೆ. ತನ್ನ ಜಾತಿಯಲ್ಲಿಯ ಬಲಹೀನವೂ ಅಸಹಾಯಕವೂ ಆದವುಗಳನ್ನು ತಿಂದು ಬದುಕುವ ಪ್ರಾಣಿಯ ಹೀನತನ ಮನುಷ್ಯನಿಗೆ ಸರಿಯೆ ಎಂದು ಪ್ರಶ್ನಿಸಿದ್ದಾರೆ.

'ನಿನ್ನ ತುತ್ತು ನಿನಗೆದಕ್ಕು
ಮೂರು ಲೋಕದಲ್ಲಿ ಹರಿವ
ಗಂಗೆ ಮೀಸಲನ್ನು ಮುರಿಯೆ
ಮೀನ ಮೊಸಳಗುಂಟೆ ಬಾಯಿ?'

ಮನುಷ್ಯ ಮನುಷ್ಯನಾಗಬೇಕು. ಹೀನ ಪ್ರಾಣಿಗಳಂತಾಗಬಾರದು. ಇಲ್ಲಿಯ 'ನನ್ನ ನನ್ನ ನನ್ನದೆಂದು' ಎಂಬ ನುಡಿಯಲ್ಲಿ ಅನ್ನ, ಅನ್ನ ಎಂಬ ದನಿಯೂ ಇದೆ. ಇದು ಬೇಂದ್ರೆಯವರು ಪದಗಳ ಮಿಡಿತವರಿದು ಬಾರಿಸಿದ ಕಾವ್ಯ ಕಿನ್ನರಿ. ಅವರದೇ ನಾದ, ಅರ್ಥ ಭಾವ ವೈಶಿಷ್ಟ್ಯ. ಎಲ್ಲರ ಅನ್ನವನ್ನು ತನ್ನದೇ ಎಂದು ಎಷ್ಟು ತಿಂದರೂ ಏ ಕ್ಷುಲ್ಲಕ ಮನುಷ್ಯ ನೀನು ಅನ್ನವನ್ನು ನಿನ್ನ ಎಂಜಲಾಗಿಸಲು ಸಾಧ್ಯವಿಲ್ಲ. ಅದರಿಂದ ನೀನು ಪೋಷಣೆಗೊಳ್ಳಬಹುದು. ಇತರರದನ್ನು ನೀನು ಸವಿದು ನಿನ್ನ ಎಂಜಲೆಂದು ಪೋಷಿಸಲಾಗದು. ಇದು ವಿಶ್ವತತ್ವ ಎಂಬುದನ್ನು ತಿಳಿದು ಬಾಳು ಎಂದು ವ್ಯಂಗ್ಯವಾಗಿ ತಿಳಿಸಿದ್ದಾರೆ.

ಈ ಜಗದ ಜನರೇ ಬೆಳಕು. ಅವರನ್ನು ಬೆಳೆಸಲು ದವಸ ಧಾನ್ಯದ ಬೆಳೆಯಿದೆ. ಆ ಅನ್ನವನ್ನು ತನಗೆ ಬೇಕಾದಷ್ಟು ಮಾತ್ರ ತಿಂದು ಬದುಕುವುದಷ್ಟೆ ಮಾನವತ್ವ, ಅದನ್ನು ಹೊರತು ಪಡಿಸಿ ದುಷ್ಟ ಶಕ್ತಿಯಾಗಿ ಕಬಳಿಕೆಗೆ ಹೊರಟರೆ 'ಉಳಿದ ಹಾಳು ಬಾಯಿಗಳಿಗೆ । ಕಾಳುಕಡಿಯು ಹುಟ್ಟಲಿಲ್ಲ' ಎಂಬಂತಾಗುತ್ತದೆ. ಅನ್ನವೇ ಅಮೃತ.

ಅನ್ನದಿಂದಲೇ ಸರ್ವಸ್ವವೂ ಆಗಿರುವುದು, ಎಲ್ಲವೂ ಉಳಿದು ಪ್ರಕಾಶಗೊಳ್ಳುವುದು. ಅದು ಯಾರ ಹಿಡಿತಕ್ಕೂ ಸಿಕ್ಕದ್ದು ಎಂಬ ಸತ್ಯವನ್ನು ಮನುಷ್ಯರು ತಿಳಿಯಬೇಕಾಗಿದೆ.

'ಅನ್ನವಮೃತವಿದ್ದ ಹಾಗೆ
ಯಾರ ಬಾಯಿಯಲ್ಲು ಕೂಡ
ಕರಗಲಿಲ್ಲ, ಅರಗಲಿಲ್ಲ.'

ಬೇಂದ್ರೆಯವರು ಮೂರನೆಯ ಭಾಗದಲ್ಲಿ ಅನ್ನಯಜ್ಞದ ವ್ಯಾಪ್ತಿಯನ್ನು ಮಾನವನ ವ್ಯಕ್ತಿತ್ವ ವಿಕಾಸದ ಅವನ ಆತ್ಮ ತೇಜದ ಬೆಳಕಿನಲ್ಲಿ ಚಿಂತಿಸಿದ್ದಾರೆ. ಹಿಂದಿನ ಎರಡು ಭಾಗಗಳಲ್ಲಿ ಸಿರಿವಂತರ ಸ್ವಾರ್ಥ, ದುಷ್ಟತನ, ಅನ್ಯಾಯದ ಹಿನ್ನೆಲೆಯಲ್ಲಿ ಜೀವಿಯ ಬದುಕನ್ನು ವಿಶ್ಲೇಷಿಸಿದ್ದಾರೆ. ಸಾಮಾಜಿಕಪ್ರಜ್ಞೆಯನ್ನು ಯಜ್ಞದ ಪ್ರತಿಮೆಯಲ್ಲಿ ಕಾವ್ಯಾನುಭವವಾಗಿಸಿದ್ದಾರೆ. ಆ ಪ್ರಜ್ಞೆ ಪ್ರತಿ ವ್ಯಕ್ತಿಯ ವಿಕಾಸದಲ್ಲಿ ಬೆಳಕಾದರೆ ಆಗ ಅನ್ನದ ಆಹಾಕಾರದ ಕತ್ತಲೆ ಇಲ್ಲವಾಗುತ್ತದೆ. ಮನುಷ್ಯ ತನ್ನನ್ನು ಅರಿಯುವ ಅನ್ನಮಯಕೋಶ, ಪ್ರಾಣಮಯಕೋಶದಿಂದ ಮನೋಮಯ, ವಿಜ್ಞಾನಮಯ, ಆನಂದಮಯಕೋಶದತ್ತ ಸಾಗಿ ಬೆಳಕಾಗಲಿ ಎಂದು ಮೂರನೆಯ ಭಾಗದಲ್ಲಿ ಸಾರಿದ್ದಾರೆ. ಮನುಷ್ಯನು ಕಾರ್ಯಕಾರಣ ಸಂಬಂಧಗಳನ್ನು ವಿವೇಚನೆಗೆ ಒಳಪಡಿಸುವ ಶಕ್ತಿಯನ್ನು ಹೊಂದಿದ್ದಾನೆ. ಈ ಜಗದಲ್ಲಿ ಅವನ ಉಸಿರಾಟದ ಗತಿಯ ಮಿತಿಯೂ ಗೊತ್ತಿದೆ. ಆದರೆ ಅವನ ಸ್ವಾರ್ಥದ ದಾಹ ತನ್ನ ಕೆನ್ನಾಲಿಗೆಯಿಂದ ಎಲ್ಲವನ್ನೂ ವ್ಯಾಪಿಸಿ ಕಬಳಿಸುತ್ತಿದೆ. ಅದೂ ಬೆಂಕಿಯೆ. ಅದನ್ನು ತನ್ನ ವೈಯಕ್ತಿಕ ಆತ್ಮ ವಿಕಾಸದ ಯಜ್ಞಕ್ಕೆ ಉರಿಯಾಗಿಸಿಕೊಂಡರೆ ತಾನೂ ಬೆಳಗಿ, ಇತರರಿಗೂ ಬೆಳಕಾಗಿ; ಅಜ್ಞಾನ, ಅಹಂಕಾರ, ಸ್ವಾರ್ಥದ ಸಂಗ್ರಹಣ ಕತ್ತಲನ್ನು ಇಲ್ಲವಾಗಿಸಿಬಹುದು ಎಂದು ನುಡಿದಿದ್ದಾರೆ. ಪ್ರತಿವ್ಯಕ್ತಿಯೂ ಸಾಮಾಜಿಕ ಸಮಸ್ಯೆಗಳಿಗೆ ಮೂಲಕಾರಣವಾಗಿದ್ದಾನೆ. ಅವನನ್ನು ಮಾನವನನ್ನಾಗಿಸದೆ ಆ ಸಮಸ್ಯೆ ಬಗೆಹರಿಯದು. ಅವನ ವ್ಯಕ್ತಿತ್ವದ, ಆತ್ಮದ ವಿಕಾಸ ಎಂದಾಕ್ಷಣ ವೇದಾಂತ, ತತ್ವ ಎಂದು ಧಾರ್ಮಿಕ ಮೂಲಭೂತ ವಾದಿಗಳ ಪೋಷಣೆಗೆ ನಿಂತು, ಸಮಸ್ಯೆಯನ್ನು ಉಲ್ಬಣಗೊಳಿಸುವ ಬಂಡವಾಳಷಾಹಿಯ ಸಂಚು ಇನ್ನೂ ಈ ಜಗ ತಿಳಿಯದಾಗಿದೆ. ಆದಕಾರಣ ವ್ಯಕ್ತಿ ವಿಕಾಸದ ಹಿನ್ನೆಲೆಯಲ್ಲಿ ತತ್ವಜ್ಞಾನದತ್ತ ಈ ಭಾಗ ಹೊರಳಿದೆ ಎಂದು ಹೇಳುವುದು ಅಷ್ಟು ಸರಿಯಲ್ಲ.

'ಸರ್ವವರ್ಣ ಮಾನವ' ಎಂಬ ಅರಿವಿಲ್ಲದ್ದೇ ಜಗತ್ತಿನ ವರ್ಣ, ವರ್ಗ ವೈಷಮ್ಯಕ್ಕೆ ಕಾರಣವಾಗಿದೆ. ಮಾನವನನ್ನು ಅರಿಯಬೇಕಾದ್ದು ವರ್ಣ, ವರ್ಗ, ದೇಶ, ಭಾಷೆ, ಧರ್ಮದ ವಿಭಜನೆಯಲ್ಲಿ ಅಲ್ಲ. ಪ್ರತಿಯೊಬ್ಬನೂ ತನ್ನಂತೆ. ಅವನ ಆತ್ಮದ ಜ್ಯೋತಿ ತನ್ನಲ್ಲಿಯೂ ಇದೆ ಎಂಬ ತಿಳಿವಿನಲ್ಲಿ ಮಾತ್ರ.

ಪ್ರಾಣ ಅನ್ನದಿಂದ ಉಳಿದ ಮೇಲೆ, ಅದರ ಆಹಾರ ಅನ್ನವಷ್ಟೆ ಅಲ್ಲ. ಅದಕ್ಕೂ ಮೀರಿದ ಅರಿವನ್ನು ಅನ್ನವಾಗಿಸಿ ಯಜ್ಞಕ್ಕೆ ನೀಡಿ ಯಜ್ಞದುರಿಯ ಏರುವಿಕೆಯಲ್ಲಿ ಮಾನವ ವಿಕಾಸಗೊಳ್ಳಬೇಕು. ಆಗ ಉಂಟಾಗುವ ಚಿಂತನೆ 'ಅನ್ನಗಿನ್ನವೇಕೆ ಬೇಕು?' ಪ್ರಾಣವಾಯುವನ್ನು ಕುಡಿದು, ಅದನ್ನು ಬೆಳಗಲು 'ಎದೆಯ ಮುಗುಳು' ಮನಸ್ಸು ಬೇಕು. ಅದೇ ಪ್ರಾಣ ದೀಪವನ್ನು ಕುಡಿವ ಕುಡಿ. ಅದು ಭಾವದ ಎಲರನ್ನು ಉಂಡು ಅರಳುವಂತಹದು. ಆಗ ಮನಸ್ಸಿನ ಪ್ರಫುಲ್ಲತೆ ಜೀವ ಜ್ಯೋತಿಯಲ್ಲಿ ಕಂಗೊಳಿಸುತ್ತದೆ. ಸಾವೆಂಬ ಕತ್ತಲನ್ನು ಇಲ್ಲವಾಗಿಸುತ್ತದೆ. ಅದೇ 'ಬೆಂಕಿಕಿಡಿ, ಬೆಳಕಮಿಡಿ.'

'ಅನ್ನಗಿನ್ನವೇಕೆಬೇಕು?
ಪ್ರಾಣವಾಯುವನ್ನು ಕುಡಿದು
ಪ್ರಾಣದೀಪ ಬೆಳಗದೇನು?
ಕುಡಿವ ಕುಡಿಯು ಮಾತ್ರಬೇಕು.
ಎದೆಯ ಮುಗುಳೆ! ಎಲರನುಣಲು
ಅರಳು, ಅರಳು, ಉಂಡು ಅರಳು.
ನಿನ್ನ ಅರಳು ಮೊಗ್ಗೆ ಮೊಗವೆ
ಜೀವವೆಂಬ ರತ್ನ ದೀಪ;
ಸಾವು ಕತ್ತಲನ್ನು ಕೆಡಿಸಿ
ಬೆಳ್ಳ ಬೆಳಗು ಬೆಳಗಬಲ್ಲ
ಬೆಂಕಿ ಕಿಡಿಯು, ಬೆಳಕ ಮಿಡಿಯು.'

ಆ ಬೆಳಕು ಗೋಚರವಾದ ಮೇಲೆ ಅದು 'ಕತ್ತಲನ್ನು ಒಂದೆತುತ್ತಾಗಿ' ನುಂಗಿ ಬಿಟ್ಟರೆ ಅದೇ ಆನಂದಮಯಕೋಶದ ನೆಲೆ. ಅಲ್ಲಿ ಬೆಳಕೇ ಬೆಳಕು; ಕತ್ತಲಿಲ್ಲ. ಹೀಗೆ ಮಾನವ ಜೀವಿ ಕತ್ತಲ ಕುತ್ತನ್ನು ಕೊಲ್ಲುವ ತೊಂದರೆಯನ್ನು ಹೊತ್ತು ಬಂದಿದ್ದಾನೆ. ಅದನ್ನು ಕೊಂದಿದ್ದಾನೆ. ಅನ್ನಯಜ್ಞದಲ್ಲಿ ಜಗದ ಜನರ ಸ್ವಾರ್ಥ, ದುರಾಸೆ, ಸಂಗ್ರಹ ಲಾಲಸೆ, ಅನ್ಯಾಯವನ್ನು ಯಜ್ಞದುರಿಯಲ್ಲಿ ಇಲ್ಲವಾಗಿಸಿದ್ದಾನೆ. ಬೇಂದ್ರೆ ಆಶಾವಾದಿಯಾದ ಮಾನವ ಪ್ರೇಮಿ. ಅಧ್ಯಾತ್ಮ, ಭಾರತೀಯ ತಾತ್ವಿಕ ಚಿಂತನೆ, ನಂಬಿಕೆಗಳ ತಲಸ್ಪರ್ಶಿ ತಿಳಿವನ್ನು ಹೊಂದಿದ್ದ ಅವರು ಅನ್ನ ಸಮಸ್ಯೆಯ ಮೂಲೋತ್ಪಾಟನೆಗೆ ಕಾವ್ಯಯಜ್ಞ ನಡೆಸಿದ್ದಾರೆ.

'ಬೆಳಕಿನೊಂದು ಗೊತ್ತು ಹೊತ್ತು
ಬೆಳಕೆ ಬಲ್ಲದಲ್ಲವೇನು?
ಕತ್ತಲನ್ನು ಒಂದೆ ತುತ್ತs

ಮಾಡಬಲ್ಲ ಹೊತ್ತೆ ಹೊತ್ತು.
ಕತ್ತಲನ್ನು ಕೊಲುವ ಕುತ್ತ
ಹೊತ್ತು ಬಂತು! ಬಂತುಹೊತ್ತು!'

## IV ಅನ್ನಾವತಾರ

ಈ ನೆಲದ ಜನರ ಅನ್ನ-ಹಸಿವು, ಉಳ್ಳವರು-ನಿರ್ಗತಿಕರು, ಪ್ರಾಣ-ಸಾವು ಮುಂತಾದ ಸಮಸ್ಯೆಗಳಿಗೆ ಮನುಷ್ಯನ ಸ್ವಾರ್ಥ, ದುರಾಸೆ, ದೌರ್ಜನ್ಯಗಳೇ ಕಾರಣವಾಗಿವೆ. ಅವನು ಮಾನಸಿಕವಾಗಿ ಬದಲಾಗದ ಹೊರತು ಈ ಸಮಸ್ಯೆಗಳು ಪರಿಹಾರವಾಗುವುದಿಲ್ಲ. ಅವನು ತನ್ನವರನ್ನೇ ಬೇಟೆಯಾಡುತ್ತಾ; ಆಳುವವರ ಕೂಟದ ರಕ್ಷಣೆಗೆ ದೇವರು ಮತ್ತು ಧರ್ಮವನ್ನು ತುಂಬಾ ಚೆನ್ನಾಗಿ ಸೃಷ್ಟಿಸಿಕೊಂಡಿದ್ದಾನೆ. ಜನರಿಗೆ ಈ ಜಗದ ಸೃಷ್ಟಿಯ ಸತ್ಯವನ್ನು ತಿಳಿಸುತ್ತಾ, ಧರ್ಮಸೃಷ್ಟಿಸಿದ ಅವತಾರಗಳ ಮಿತಿಗಳನ್ನು ಹೇಳುತ್ತಾ; ಪ್ರಾಣದ ತ್ರಾಣಕ್ಕೆ ಬೇಕಾದ ಅನ್ನದ ಅವತಾರವಾಗಬೇಕೆಂದು ಬೇಂದ್ರೆ ಈ ಕವನದಲ್ಲಿ ತಿಳಿಸಿದ್ದಾರೆ. ಈ ಕವನ ಈ ಭೂಖಂಡದ ನೆಲ ಹಾಗೂ ನೀರಿನ ಸಂವಾದವಾಗಿ ನಾಟಕೀಯ ಗುಣವನ್ನು ಹೊಂದಿದೆ. ಬೇಂದ್ರೆಯವರು ಇದನ್ನು ಒಂದು ದೃಶ್ಯಕಾವ್ಯವಾಗಿ ರಚಿಸಿದ್ದಾರೆ. 'ಆ ಕಡೆಗೆ ರತ್ನಾಕರ (ಸಮುದ್ರ) ಈ ಕಡೆಗೆ ವಸುಂಧರಾ (ಭೂಮಿ) ಕುಳಿತಿದ್ದಾರೆ. ನಡುವೆ ನಿತ್ರಾಣವಾದ ಪ್ರಾಣದೇವನು ಬಿದ್ದುಕೊಂಡಿದ್ದಾನೆ.'

ರತ್ನಾಕರ ಮತ್ತು ವಸುಂಧರಾ ಅವರ ಸಂವಾದದಲ್ಲಿ ರತ್ನಾಕರನು 'ಹೆಸರು ರತ್ನಾಕರ । ಕುಡಿಯುವೆ ಕಣ್ಣೀರಾ' ಎಂದು ತಾನು ದುಃಖದಲ್ಲಿರುವುದನ್ನು ತಿಳಿಸಿದ್ದಾನೆ. ಅವನು ರತ್ನಾಕರನಾದರೂ ಅವನ ನಂಟು ಭೂಮಿಯ ಜೊತೆಗಿನದು. ಅವನ ತೀರದಲ್ಲಿ ಜನರಬೀಡು. ಆ ತೀರದ ಜನರ ದುಃಖವೇ ತನ್ನ ದುಃಖವಾಗಿದೆ ಎಂಬ ರೀತಿಯಲ್ಲಿ 'ಅಯ್ಯೋನನ ತೀರಾ-ತೀರದು ದುಃಖಾ' ಎಂದು ಒರಲಿ ಚಡಪಡಿಸುತ್ತಿದ್ದಾನೆ.

ನೆಲದಾಯಿ ಪೃಥ್ವಿ ಗಂಧವತಿ. ಅವಳೇ ಪ್ರಕೃತಿ. ಅವಳ ಸೃಷ್ಟಿಯಲ್ಲಿ ಜಡ, ಚೈತನ್ಯದ ಜೀವಕೋಟಿಗಳಿದ್ದರೂ ಮಾನವ ಮಗುವಿನ ಬಗ್ಗೆ ಆಕೆಗೆ ಹೆಚ್ಚು ಕಾಳಜಿ. ತಾನು ವಸುಂಧರೆಯಾದರೂ ತನ್ನ ಮಾನವ ಮಕ್ಕಳು ಅನ್ನಕ್ಕಾಗಿ ಮೊರೆಯಿಡುವ ನಿಟ್ಟುಸಿರಿನ ವ್ಯಥೆ ಅವಳನ್ನು ಕಾಡಿದೆ. ಆಕೆ ನುಡಿಯುತ್ತಾಳೆ :

'ಮಗುವು ನಿರಾಧಾರಾ
ಹೆಸರು ವಸುಂಧರಾ

ಇಟ್ಟಾರ ಯಾರು ನಿಟ್ಟುಸಿರಿನ ಲೆಕ್ಕಾ?
ಉಸುರಿನ ಲೆಕ್ಕಾ?'

ಮನುಷ್ಯರು ತಮ್ಮ ದ್ವೇಷ, ಅಸೂಯೆ; ಲಾಲಸೆ, ಕ್ರೌರ್ಯದಿಂದ ಪರಸ್ಪರರು ಹೊಡೆದಾಡಿ ಸಾಯುತ್ತಿದ್ದಾರೆ. ತನ್ನದೇ ಅಹಂನಿಂದಾಗಿ ಬೀಗಿದ ಹೂಂಕಾರದಿಂದ ಕೆಲವರಿದ್ದರೆ; ಹಲವರು ಅವರ ತುಳಿತಕ್ಕೆ ಒಳಗಾಗಿ ಇದ್ದೂ ಇಲ್ಲದಂತಾಗಿದ್ದಾರೆ. ಇಲ್ಲಿ ಸತ್ತವನೇ ಗೆದ್ದ ಎಂದು ಹೇಳಬೇಕಾಗಿದೆ. ಕಾರಣವೆಂದರೆ ಇರುವವರು ಸತ್ತಂತಿದ್ದಾರೆ ಎಂದು ಕವಿ ರತ್ನಾಕರನ ನುಡಿಯಲ್ಲಿ ಜನರನ್ನು ಛೇಡಿಸಿದ್ದಾರೆ.

'ಗೆದ್ದನು ಸತ್ತಾವ
ಸತ್ತಾನ ಇದ್ದಾವ
ಇದ್ದಾಗ ಇದ್ದಾಂಗ ಅನಿಸಲೆ ಇಲ್ಲಾ
ಅನಿಸಲೆ ಇಲ್ಲಾ.'

ವಸುಂಧರೆಯು ಈ ಮಾನವನ ದುರಾಸೆ ಮಿತಿ ಮೀರಿದ್ದು; ಯಾವ ಕಲ್ಪನೆಗೂ ಸಿಗದ ದಾಹ ಎಂದು ತಿಳಿದಿದ್ದಾಳೆ. ಹೀನ ಮಾನವನು ತಾನು ಮಾತ್ರ ಬಾಳಬೇಕು, ಉಳಿಯಬೇಕು ಎಂಬ ಆಸೆಯನ್ನು ಸತ್ತರೂ ಬಿಡನು. ಅವನ ಎಲುಬು ಮಣ್ಣುತಿಂದು ಬದುಕುತ್ತೇನೆ ಎನ್ನುತ್ತದೆ ಎಂದು ವ್ಯಂಗ್ಯವಾಗಿ ಹೇಳಿದ್ದಾಳೆ :

'ಹಾಳಾದರೂ ಪ್ರಾಣಿ
ಹೂಳಿದ ಅವನೆಲಬು
ಬಾಳೇವು ಅಂತಾವ ಮಣ್ಣು ತಿನ್ನುತ್ತಾ
ಮಣ್ಣು ತಿನ್ನುತ್ತಾ'

ಮನುಷ್ಯರ ವಾಸ್ತವ ಕ್ರೂರ ಚಿತ್ರವನ್ನು ಪ್ರಾರಂಭದ ಸಂವಾದದಲ್ಲಿ ನೀಡಿದ ಕವಿಯು; ಮನುಷ್ಯನು ಅಹಂನಿಂದ, ದೌರ್ಜನ್ಯದರ್ಪದಿಂದ ವ್ಯವಸ್ಥೆಯನ್ನು ತನ್ನ ಕೈವಶ ಮಾಡಿಕೊಂಡು, ತನ್ನವರನ್ನು ಶೋಷಿಸಿದ ಅವತಾರಗಳನ್ನು ಛೇಡಿಸಿದ್ದಾರೆ. ನೀರು ಮತ್ತು ನೆಲದ ಒಡಲಿನಿಂದಲೇ ಈ ಜಗತ್ತಿನ ಸರ್ವವೂ ಸೃಷ್ಟಿಯಾಗಿರುವುದರಿಂದ ದಶಾವತಾರದ ಮತ್ಸ್ಯ ಅವತಾರ ಸಮುದ್ರದ ಪಾಚಿಯ ನಂತರದ ನೀರಿನಲ್ಲಿ ಸೃಷ್ಟಿಯಾದ ಸದಾ ಜಾಗೃತ ಜಲಚರ. ಅದರ ನಂತರ ನೀರು ಮತ್ತು ನೆಲದ ಮೇಲೆ ವ್ಯಾಪಿಸುವ ಕೂರ್ಮದ ಸೃಷ್ಟಿ ಜಲವನ್ನು ಪೂರ್ಣವಾಗಿ ಬಿಟ್ಟು ನೆಲವನ್ನೇ ಆಶ್ರಯಿಸಿದ್ದು ವರಾಹ. ಪ್ರಾಣಿ ಮತ್ತು ಮನುಷ್ಯನ ಎರಡೂ ಲಕ್ಷಣಗಳನ್ನು ಹೊಂದಿದ ನರಸಿಂಹ ಸೃಷ್ಟಿ ಅನಂತರದ್ದು. ಈ ಅವತಾರಗಳ ಕಲ್ಪನೆಯಲ್ಲಿ ಜೀವವಿಕಾಸದ ವೈಜ್ಞಾನಿಕ

ಬೆಳವಣಿಗೆಯ ಸೂಚನೆ ಇದೆ. ಅನಂತರದ ಅವತಾರಗಳು ಮನುಷ್ಯ-ಮನುಷ್ಯರ ಸಂಘರ್ಷದಲ್ಲಿ ಮಾನವತೆಯ ಉಳಿವಿಗಾಗಿ ಪ್ರಯತ್ನಿಸಿದ ಮಾನವ ಶ್ರೇಷ್ಠರ ಚಿತ್ರಣಗಳು. ಅವು ವಾಮನ. ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ. ಈ ಅವತಾರಗಳನ್ನು ಬೇಂದ್ರೆಯವರು ಒಂದೊಂದೇ ನುಡಿಯಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸಿ ಅದರ ಗುಣಲಕ್ಷಣಗಳನ್ನು ಚಿತ್ರಿಸಿರುವುದು ಅವರ 'ಅಡಕ ಅಭಿವ್ಯಕ್ತಿ ಕಲೆ'ಯಾಗಿದೆ.

ನೀರದೇವ – ಮತ್ಸ್ಯ, ಕೂರ್ಮ ಅವತಾರ
ತೀರದೇವ – ವರಾಹ ಅವತಾರ
ಕಾಡೋದೇವ – ನರಸಿಂಹ ಅವತಾರ
ಬೇಡೋದೇವ – ವಾಮನ ಅವತಾರ
ದುಡುಕುದೇವ – ಪರಶುರಾಮ ಅವತಾರ
ಮಿಡುಕುದೇವ – ರಾಮ ಅವತಾರ
ಯುದ್ಧದೇವ – ಕೃಷ್ಣ ಅವತಾರ
ಇನ್ನೆರಡುದೇವ – ಬುದ್ಧ, ಕಲ್ಕಿ ಅವತಾರ.

ಈ ದೇವರೆಲ್ಲ ಅವತರಿಸಿದರೂ ಆಹಾರ ತಾರದೆ, ಹೊಟ್ಟೆ ತುಂಬದೆ, ಬಡವರ ಹೊಟ್ಟೆ ತಣ್ಣಗಿರದೆ ಹಸಿವು ಹಾಗೇ ಉಳಿದಿದೆ. ಇದ್ದವರ ಇರು ಚಿಂತೆ ಬಗೆಹರಿಯದೆ ಬೆಳೆಯುತ್ತಿದೆ ಎಂಬುವುದು ಸಂವಾದದಲ್ಲಿ ತೀವ್ರವಾಗಿ ಅಭಿವ್ಯಕ್ತಗೊಂಡಿದೆ. ಸಂವಾದದ ಕೊನೆಯಲ್ಲಿ ಅದುವರೆಗೆ ಮೌನವಾಗಿದ್ದ 'ಪ್ರಾಣದೇವ' ಅನ್ನವಿಲ್ಲದೆ ನಿತ್ರಾಣನಾಗಿ ನುಡಿದಿದ್ದಾನೆ : 'ಅನ್ನದೇವರು ಮಾತ್ರ ಇನ್ನೂ ಬರಲಿಲ್ಲೋ। ಇನ್ನೂ ಬರಲಿಲ್ಲಾ'. 'ಅನ್ನದೇವ'ರ ಸೃಷ್ಟಿಯಲ್ಲಿ ಬೇಂದ್ರೆಯವರ ಸಾಮಾಜಿಕ ಚಿಂತನೆ ಹರಳುಗಟ್ಟಿದೆ.

## V ಹೆಣದ ಹಿಂದೆ

ಬೇಂದ್ರೆಯವರಿಗೆ ಭಾರತೀಯ ಸಂಸ್ಕೃತಿಯ ಅನಿಷ್ಟವಾದ ಬಾಲ್ಯ ವಿವಾಹ ಹಾಗೂ ವಿಧವಾ ಪದ್ಧತಿ ನಿರ್ಮೂಲನೆಯ ತುಡಿತ ತೀವ್ರವಾಗಿತ್ತು. ಈ ಸಾಮಾಜಿಕ ಅನಿಷ್ಟ ಮುಗ್ಧ ಹೆಣ್ಣು ಮಕ್ಕಳನ್ನು ಶೋಷಿಸುವುದರ ವಿರುದ್ಧ ತೀವ್ರ ಆಕ್ರೋಶವಿತ್ತು. 'ಪುಟ್ಟವಿಧವೆ' 'ಕಥೆಯಾದಳು ಹುಡುಗಿ' ಬಾಲ್ಯವಿವಾಹವನ್ನು ಕುರಿತದ್ದಾಗಿದ್ದು; 'ಹೆಣದ ಹಿಂದೆ' (ರಚನೆ : ೧೯೩೨, ಮುಗದ) ವಿಧವೆಯ ನೋವಿನ ಕವನವಾಗಿದೆ. ಇದೊಂದು ದೀರ್ಘಕವನವಾಗಿ ವಿಧವೆಯ ನೋವನ್ನು ಎಳೆ ಎಳೆಯಾಗಿ ಬಣ್ಣಿಸಿ ಅವಳ ಮತ್ತು ಅವಳ ಕೂಸಿನ ಸ್ಥಿತಿಗೆ ಕಳವಳ ವ್ಯಕ್ತಪಡಿಸಿದೆ.

ಈ ಕವನ ಸತ್ತ ಗಂಡನ ಶವದ ಮೆರವಣಿಗೆಯ ಹಿಂದೆ ಅನಾಥಳಾಗಿ ಓಡುತ್ತಿರುವ ಹೆಣ್ಣಿನ ಹೃದಯ ವಿದ್ರಾವಕತೆಯನ್ನು ಚಿತ್ರಿಸಿದೆ. ಅವಳು ಭೂಮಿತಾಯಿಯಾದ ನೆಲವನ್ನು 'ಬಿರಿಯೆ ತಾಯಿ ನಿನ್ನ ಎದೆಯ। ಬಾಗಿಲನ್ನು ತೆರೆಯೆತಾಯಿ' ಎನ್ನುವಂತೆ ಅಮುಕಿ ಗೋಳಿಡುತ್ತಿದ್ದಾಳೆ. ದುರಂತಕ್ಕೊಳಗಾದ ಹೆಣ್ಣಿನ ಅಂತರಿಕ ಶಕ್ತಿಯನ್ನು 'ಓಡುತಿಹಳು ಗಾಳಿಸೇರಿದಂತೆ', 'ಎರಡು ಕಣ್ಣು ಮುಚ್ಚಿಕೊಂಡಿನ್ನೊಂದು ತೆರೆಯಲೆಂದು ಜಾನಿಸುವಳೊ' ಎಂದು ಚಿತ್ರಿಸಿದ್ದಾರೆ. ಅದು ಆ ಶಕ್ತಿಸ್ಫೋಟಗೊಂಡರೆ ಈ ಲೋಕ ನಡುಗಿ ಹೋಗುತ್ತದೆ ಎಂಬ ಸೂಚನೆಯನ್ನು ನೀಡಿದೆ.

ಎರಡನೆಯ ನುಡಿಯಲ್ಲಿ ಮದುವೆಯೆಂಬ ಸಾಮಾಜಿಕ ಸಮಾರಂಭದಲ್ಲಿ ಭಾಗವಹಿಸಿ ಒಂದಾಗಿ ಮೆರೆದ ಜನ ಅವಳು ವಿಧವೆಯಾದ ತಕ್ಷಣ ದೂರವಾದ ದಾರುಣ ವ್ಯಂಗ್ಯವನ್ನು ಬಣ್ಣಿಸಿದೆ.

'ಶೋಭಾನೆ ಹೇಳಿದವರು
ಅಕ್ಕಿ ಕಾಳ ತೂರಿದವರು
ಅವನ ಹೆಸರ ಕೇಳಿದವರು
ಎಡಕೆ ಬಲಕೆ ಹಾಯಲಿಲ್ಲ.'

ಮೂರನೆಯ ನುಡಿಯ 'ಮುಳ್ಳು', 'ಶಾಂತಿಪಾಠ' ಅವಳ ಸುಂದರ, ಸುಪುಷ್ಟ ದೇಹ ಮನಸ್ಸನ್ನು ಘಾಸಿಗೊಳಿಸಿ ನಿರ್ಜೀವಗೊಳಿಸಿದ ಪ್ರತಿಮೆಗಳಾಗಿವೆ. ಅವಳ ಬೆಳಕಿನ ಇನ್ನೊಂದು ಕಣ್ಣಾದ ಗಂಡನನ್ನು ಕಳೆದುಕೊಂಡ ಅವಳಿಗೆ ಲೋಕ ಕತ್ತಲಾಗಿದೆ. ಜೀವ ಸ್ಪಂದನವಿಲ್ಲದ ಉಪದೇಶ– ಶಾಂತಿ ಪಾಠವಾಗಿದೆ. ಜೀವನದ ಕತ್ತಲಲ್ಲಿ ಕೈಹಿಡಿಯದವರ ಶಾಂತಿಪಾಠ : 'ಇದ್ದವರಿಗೆ ಇಹುದು ಎಲ್ಲ । ಇಲ್ಲದವರಿಗಿಲ್ಲೆ ಇಲ್ಲ'

ಬೇಂದ್ರೆಯವರು ಹೆಣದ ಹಿಂದೆ ಓಡುತ್ತಿರುವ ಹೆಣ್ಣಿನ ಅಸಹಾಯಕಸ್ಥಿತಿ, ನಿರಾವಲಂಬನತೆ, ಅಶಾಂತ ಮನಸ್ಸಿನ ದುರಂತದ ಕತ್ತಲೆಯಲ್ಲಿ ಅವಳೇ ಬೆಳಕಾಗಿ ಹೊಮ್ಮಬೇಕು ಎಂದಿದ್ದಾರೆ. ಆ ಮನೋಸ್ಥೈರ್ಯವೇ ಅವಳನ್ನು ಉಳಿಸುವುದು ಎಂಬ ಚಿಂತನೆ ಈ ಕವನದ ತಿರುಳಾಗಿದೆ. ಅವಳಿಗೆ 'ಹೆಣ್ಣು ಪಾಡು ನಾಯಿ ಪಾಡು' ಎಂಬುದುಗೊತ್ತಿದೆ. ಹೆಣ್ಣಿನ ಶ್ರೇಷ್ಠತೆ ಇರುವುದು ವಾತ್ಸಲ್ಯ, ಮಮತೆ ಹಾಗೂ ಪೋಷಕ ಶಕ್ತಿಯಲ್ಲಿ. ಅವಳು ಏನೂ ಆಸರೆ ಇಲ್ಲದ ಸ್ಥಿತಿಯಲ್ಲಿಯೂ ತನ್ನ 'ಮರುಳುಕರುಳಾವ ಮಗುವಿಗಾಗಿ' ತನ್ನ ಆಂತರಿಕಶಕ್ತಿ ಚೈತನ್ಯವನ್ನು ಜಾಗೃತಗೊಳಿಸಿಕೊಂಡು ಉಳಿಯುತ್ತಾಳೆ. ಮಾತೆಯ ಆಂತರಿಕ ಬೆಳಕು ಮಾನವ ಕುಲವನ್ನು ರಕ್ಷಿಸುತ್ತದೆ.

'ಗಂಡು ಹೆಣವು – ಹೆಣ್ಣು ಅಳುವು,
ಬಾಳು ಕಾಡು – ಕೂಸುಪಶುವು.'

ಆಗಿದ್ದಾಗ ಈ ಕಾವ್ಯದ ವಿಧವೆ ಜಾಗೃತಗೊಂಡು ಕೆರೆಯಹಾದಿ ಹಿಡಿಯದೆ ನೆಲದ ಹಾದಿ ಹಿಡಿದಿದ್ದಾಳೆ. ತನ್ನನ್ನೇ ತಾನು ಸ್ವಯಂ ಶಿಕ್ಷೆಗೆ ಒಳಗಾಗಿಸಿಕೊಂಡು ತನ್ನ ಸ್ಥೈರ್ಯದ ತೇಜದಿಂದ ಉಳಿದಿದ್ದಾಳೆ. ಇದು ಬೇಂದ್ರೆ ಕಾವ್ಯದಲ್ಲಿ ಮಿಡಿಯುವ ಧನಾತ್ಮಕ ಚಿಂತನೆ. ಆತ್ಮಸ್ಥೈರ್ಯ. ಇದೇ ಬೇಂದ್ರೆ ಕಂಡ ಮಾತೃತತ್ವ

'ತನ್ನ ದುಃಖ ನುಂಗಿಕೊಂಡು
ಅವಳು ಹಸಿವ ಕಳೆಯಬೇಕು.
ತಾನೆ ಅತ್ತು ಹಾಡಿಕೊಂಡು
ತನ್ನ ತಾನು ರಮಿಸಬೇಕು.'

ಐದನೇ ನುಡಿ ಅವಳ ಮುಂದಿನ ಬಾಳಿನ ಚಿಂತೆ, ಕನಲಿಕೆ, ಹೊಟ್ಟೆಕಿಚ್ಚಿನ ನುಡಿಯಾಗಿದೆ. ಆರನೇ ನುಡಿ ಮಾತೆಯ ಸಂಹಾರಕ ಶಕ್ತಿಯಾದ ಕಾಳಿಯ ಭಯಂಕರತೆ ಸೂಚಿಸಿ ಹಾಗೆ ಆಗಬೇಡವೆಂದು ಕೋರಿದೆ. ಅವಳ ಉದಾತ್ತಾ ಭಾವಗಳನ್ನು ಕೊಂಡಾಡಿದ 'ಭೂಮಿತಾಯಿಯಂತೆ ನಿನಗೆ । ತಾಳ್ಮೆಯೊಂದೆ ಬಾಳ್ಮೆಯಹುದು.' ಎಂಬ ಚಿಂತನೆ ಏಳನೇ ನುಡಿಯಲ್ಲಿದೆ.

ಎಂಟನೆಯ ನುಡಿ 'ಸ್ತ್ರೀ ಶಕ್ತಿ'ಯ ಉದ್ಧಾರಕ ಹಾಗೂ ಸಂಹಾರಕ ಶಕ್ತಿಯನ್ನು ಹಲವು ಪ್ರತಿಮೆಗಳಲ್ಲಿ ವ್ಯಂಜಿಸಿ ಅದರ ಮುಖಾಮುಖಿಯಲ್ಲಿ ಜಗತ್ತಿಗೆ ಬೆಳಕಾಗುವ 'ದೇವದೂತ'ನನ್ನು ಹಡೆಯುವ ಮಾತೆ ಅವಳೇ ಎಂದಿದ್ದಾರೆ. ಈ ಭಾಗದಲ್ಲಿ ಸ್ತ್ರೀಪರ ಚಿಂತನೆ ಹರಳುಗೊಂಡಿದೆ. 'ಸ್ತ್ರೀಶಕ್ತಿ'ಯೇ ಜಗದ ಬೆಳಕು, ಗಾಳಿ, ಜೀವಜಲ, ಮಣ್ಣುಹುಡಿ ಎಂದು ಸಾರಿ ಹೇಳಿದೆ.

'ಸ್ತ್ರೀಯೆ ಮನುವು, ಸ್ತ್ರೀಯೆಮನುವು'
ಇಂದು ರವಿಯು ಆಡುತಿರುವ
ಹೊಳೆಗಳಲ್ಲಿ ಹರಿಯುತಿರುವ
ಹುಡಿ ಹುಡಿಯೂ ನುಡಿಯುತಿಹುದು.

ಮಾತೃಭಕ್ತ ಕವಿ 'ಅಂಬಿಕಾತನಯದತ್ತ'ರ ಸ್ತ್ರೀಪರ ಚಿಂತನೆ, ಸ್ತ್ರೀ ಶಕ್ತಿಯ ಭರತ ವಾಕ್ಯದಂತಿದೆ ಒಂಭತ್ತನೇ ನುಡಿ. ಈ ಜಗದಲ್ಲಿ ಮಾತೃ ಪ್ರಧಾನ ಸಮಾಜ ಮೂಡುವುದು ಎಂಬ ಭರವಸೆಯಲ್ಲಿ 'ಆದಿಮಾಯೆ, ತಾನೇ ತಾಯಿಯಾಗಿ ಬರುವಳು' ಎಂದು ನುಡಿದ ಬೇಂದ್ರೆ ಅದು ಪ್ರಕೃತಿ ಸಹಜ ಕ್ರಿಯೆ ಎಂಬಂತೆ ಘೋಷಿಸಿದ್ದಾರೆ :

'ಭೂಮಿತಾಯಿ ಏಳಲಿಹಳು
ತನ್ನ ದಿವ್ಯಲೀಲೆಗೆ'

## VI ಕುರುಡು ಕಾಂಚಾಣ

ಬೇಂದ್ರೆಯವರ ಸಾಮಾಜಿಕ ಪ್ರಜ್ಞೆಯ ಕವನಗಳಲ್ಲಿ ಅರ್ಥ ವ್ಯವಸ್ಥೆಯ ಹಿಡಿತ ಮತ್ತು ಕ್ರೌರ್ಯವು 'ಕುರುಡು ಕಾಂಚಾಣ' (ರಚನೆ : ೧೯೩೨)ದಲ್ಲಿ ತೀವ್ರವಾಗಿ ಬಿಂಬಿತವಾಗಿದೆ. 'ಕುರುಡು ಕಾಂಚಾಣ' ನುಡಿಗಟ್ಟು ಹಣದ ಒಟ್ಟು ಲಕ್ಷಣವನ್ನು ಧ್ವನಿಸಿದೆ. ಅದರ ತುಳಿತಕ್ಕೆ ಒಳಗಾದ ಅಸಹಾಯಕ ಕೂಲಿ ಕಾರ್ಮಿಕರ, ದೀನ ದಲಿತರ ಆಂತರಿಕ ಪ್ರಜ್ಞೆಯ ದನಿಯಾಗಿ ಈ ಕಾವ್ಯ ಹೊಮ್ಮಿದೆ. ಇದೊಂದು ಬೇಂದ್ರೆಯವರ ಶ್ರೇಷ್ಠ ಕವನವಾಗಿದೆ.

'ಕುರುಡು ಕಾಂಚಾಣ ಕುಣಿಯುತಲಿತ್ತು।
ಕಾಲಿಗೆ ಬಿದ್ದವರ ತುಳಿಯುತಲಿತ್ತೋ'

ಎಂಬ ಪಲ್ಲವಿ ಅದರ ಕಾಲಿಗೆ ಬಿದ್ದವರನ್ನು ಕುಣಿದು ಆಕರ್ಷಿಸುತ್ತಲೇ ತುಳಿವ ದಾರ್ಷ್ಟ್ಯ ಮತ್ತು ಕ್ರೌರ್ಯವನ್ನು ಚಿತ್ರಿಸಿದೆ.

ಈ ಕವನದಲ್ಲಿ ಮೂರು ಭಾಗಗಳಿದ್ದು ಮೊದಲ ಭಾಗ ಪ್ರತಿಮೆಗಳ ಸರಮಾಲೆಯಲ್ಲಿ ಹಣದ ದೌರ್ಜನ್ಯದ ಕುಣಿತವನ್ನು ವರ್ಣಿಸಿದೆ. ಬೇಂದ್ರೆಯವರು ಮಹಾಲಕ್ಷ್ಮಿಯ ಉಪಾಸಕರಾದ ಗೊಂದಲಿಗರ ಜೊತೆ 'ಕುರುಡು ಕಾಂಚಾಣ'ವನ್ನು ರೂಪಕವಾಗಿ ಬಳಸಿದ್ದಾರೆ. 'ಕುರುಡು ಕಾಂಚಾಣ'ದ ಗೊಂದಲಿಗ ಕುಣಿಯುವಾಗ ಸಾಬೂನಿನ ಬಿಳುಪಿನಂತಾದ ಸತ್ತ ಬಾಣಂತಿಯರ ಎಲುಬನ್ನು ಕಾಣದ ಕಿರುಗೆಜ್ಜೆಯಾಗಿ ಕಟ್ಟಿಕೊಂಡಿದ್ದಾನೆ ಎಂದಿದ್ದಾರೆ. ಅದು ಮಾತಿನಿಂದ ವರ್ಣಿಸಲಾಗದ ಶೋಷಣೆಗೆ ನೀಡಿದ ಅದ್ಭುತ ಪ್ರತಿಮೆಯಾಗಿದೆ. ಶೋಷಣೆಗೆ ಒಳಗಾಗಿ ನಿರ್ಜೀವವಾದ ಬಾಣಂತಿ ಎಲುಬು ಸಾಬಾಣದ ಬಿಳುಪಿನ ಪ್ರತಿಮೆಯಲ್ಲಿ ಶೋಷಣಾ ದನಿಯಾಗಿ ಹರಿದಿದೆ.

ಅದುತೊಟ್ಟ ತೊಡಿಗೆ ಹಾಲುಸಿಗದೆ, ಆರೈಕೆಯನ್ನೇ ಕಾಣದೆ ಸತ್ತ ಕಂದಮ್ಮಗಳ ಕಣ್ಣಿನ ಕವಡೆಯಾಗಿದೆ ಎಂದಿದ್ದಾರೆ. ಕವಡೆಯನ್ನು, ಹಿಡಿದುನೋಡಿದರೆ ಅದು ಕಣ್ಣಿನ ಆಕೃತಿಯಲ್ಲಿರುತ್ತದೆ. 'ಕುರುಡು ಕಾಂಚಾಣ'ದ ಕೊರಳಲ್ಲಿ 'ಸಣ್ಣ ಕಂದಮ್ಮಗಳ। ಕಣ್ಣೀನ ಕವಡೀಯ। ತಣ್ಣನ್ನ ಜೋಮಾಲೆ ಕೊರಳೊಳಗಿತ್ತೋ।' ಎಂಬ ರೂಪಕ ನೀಡುತ್ತ 'ತಣ್ಣನ್ನ ಜೋಮಾಲೆ' ಎಂಬ ಶಬ್ದದಲ್ಲಿ ಸಾವಿನ, ಸಾವಿಗೆ ಕಾರಣವಾದ ಹಣದ ಕ್ರೂರತೆಯನ್ನು ಧ್ವನಿಸಿದ್ದಾರೆ.

ಆ 'ಕುರುಡು ಕಾಂಚಾಣ'ದ ಕೈಯಲ್ಲಿರುವುದು ಬಡವರ ಒಡಲಿನ ಹಸಿವಿನ ಸುಡುಸುಡು ಪಂಜು ಎಂದು ಹೇಳಿ ಹಸಿವಿನ ಕಿಚ್ಚನ್ನು ಹಿಡಿದ ಹಣದ ಕ್ರೌರ್ಯ, ದಾಹವನ್ನು ಬಿಂಬಿಸಿದ್ದಾರೆ. ಅದು ದೀನ ದಲಿತರ, ಕೂಲಿಕಾರ್ಮಿಕರ ಕಂಬನಿಯನ್ನು ಕುಡಿದು ಆ ಹುಂಬ ಬಾಯಿಯಲ್ಲಿ 'ಉಧೋ ಉಧೋ' ಎಂದು ಕುಣಿಯುತ್ತಿದೆ. ಅದರ ಅತಿದಾಹದ ಗೂಳಿಡುವ ಪರಿ ಗೊಂದಲಿಗರ 'ಉಧೋ, ಉಧೋ' ದನಿಗೆ ಸಂವಾದಿಯಾಗಿದೆ.

ಅದು ಕೂಲಿನಾಲಿ ಮಾಡುವ ಜನರ ದುಡಿಮೆಯ ಮೈದೊಗಲ ಧೂಳನ್ನು ಭಂಡಾರವಾಗಿ ಹಣೆಯಲ್ಲಿ ಧರಿಸಿದೆ ಎಂದು ಹಣದ ಭಯಾನಕತೆಯನ್ನು ಚಿತ್ರಿಸಿದ್ದಾರೆ.

ಎರಡನೇ ಭಾಗದಲ್ಲಿ ಅದರ ಕುಣಿತದ ಶೋಷಣಾ ನೆಲೆಗಳನ್ನು ಕವಿ ಪರಿಚಯಿಸಿದ್ದಾರೆ. ದೇವರ ಗುಡಿಯ ಗಂಟಾನಾದದ ಗಣಣ; ಅಧಿಕಾರದ, ಸಿರಿವಂತಿಕೆಯ ಮಹಡಿಯಲ್ಲಿನ ಹಣದ ಎರಚಾಟದ ತನನ; ದ್ರೋಹ ಚಿಂತನೆಯೇ ಮೂಲವಾದ ವ್ಯಾಪಾರದ ಅಂಗಡಿಗಳಲ್ಲಿ ಲಾಭದಿಂದ ನಲಿವ ಝುಣಣ ಹಣದ ವಿವಿಧ ನುಡಿಯಾಗಿದೆ.

ಮೂರನೆಯ ಭಾಗ ಹಾಗೆ ಮೇರೆಮೀರಿ ಕುಣಿದ 'ಕುರುಡು ಕಾಂಚಾಣ' ಅಂಗಾತಬಿದ್ದಾಗ ಅದನ್ನು ಹೊತ್ತು ಎಸೆಯುವ ಚಿತ್ರಣ ನೀಡಿದೆ. ಅದರ 'ಹ್ಯಾಂಗಾರೆ ಕುಣಿವ' ವಿಕೃತ ಕೆಟ್ಟ ಕುಣಿತ 'ಮಂಗಾಟ' ಅಂಗಾತವಾಗಿ ಬೀಳಲು ಕಾರಣವಾಗಿರುವ ಅದರ ಅಸಹ್ಯ ಲಕ್ಷಣವಾಗಿದೆ.

"ಕುರುಡು ಕಾಂಚಾಣ ಒಂದು ಅದ್ಭುತವಾದ ಪ್ರತಿಮಾ ಭಾವಗೀತೆ" ಎಂದು ಹೇಳುತ್ತ ಡಾ॥ ಪ್ರಭುಶಂಕರ ಅವರು "ಪಾಶ್ಚಾತ್ಯ ಸಾಹಿತ್ಯವನ್ನು ಬಲ್ಲವರು ಹೇಳುತ್ತಾರೆ, ಅಲ್ಲಿಯೂ ಇಷ್ಟು ಕಿರಿದರಲ್ಲಿ ಈ ತತ್ವ ಇಷ್ಟು ಶಕ್ತಿ ಪೂರ್ಣವಾಗಿ ರಸವ್ಯಂಜಕವಾಗಿ ನಿರೂಪಿತವಾಗಿಲ್ಲ"[೧] ಎಂದು ನುಡಿದಿದ್ದಾರೆ.

ವಿಶ್ವದ ಹಲವಾರು ಬಂಡವಾಳಷಾಹಿ ಬ್ಯಾಂಕುಗಳು, ಕಂಪನಿಗಳು ಮೋಸವಂಚನೆಯ ವ್ಯವಹಾರದಿಂದ ಮನಸೋ ಇಚ್ಛೆ ಕುಣಿದು ವಿಶ್ವ ವಾಣಿಜ್ಯ ವ್ಯವಸ್ಥೆ ಕುಸಿಯಲು ಕಾರಣವಾದವು. ನಮ್ಮ ದೇಶದಲ್ಲಿ ಹೇಗಾದರೂ ಹಣ ಮಾಡುವ ಪ್ರವೃತ್ತಿಗೆ ಒಳಗಾದ ಸತ್ಯಂ ಕಂಪ್ಯೂಟರ್ ಕಂಪನಿಯು 'ಹ್ಯಾಂಗಾರೆ ಕುಣಿಕುಣಿದು ಮುಂಗಾಟ ನಡೆದಾಗ' ಅದು ತಾನೇ ತಾನಾಗಿ ಕುಸಿದು ಅಂಗಾತ ಬಿತ್ತು. ಆಗ ಅದನ್ನು ಎತ್ತಿ ಒಗೆಯಬೇಕಾಯಿತು. ಈ ಹಿನ್ನೆಲೆಯಲ್ಲಿ, ಹಸಿವು ಅನ್ನವನ್ನು ಹಿಡಿತದಲ್ಲಿಟ್ಟುಕೊಂಡ ಶೋಷಕರ ಮರ್ಮ ಅರಿತಿದ್ದ ವಿಶ್ವವ್ಯಾಪಕ ಚಿಂತನಶೀಲ

೧. ಪ್ರಭುಶಂಕರ, 'ಕನ್ನಡದಲ್ಲಿ ಭಾವಗೀತೆ' ಮೈಸೂರು, ೧೯೮೧, ಪು. ೩೩೪

ವ್ಯಕ್ತಿತ್ವವುಳ್ಳ ಬೇಂದ್ರೆಯವರು ಶೋಷಕರು ತಮ್ಮ ತೋಲತಪ್ಪಿದ ವರ್ತನೆಯಿಂದ ತಾವೇ ಕುಸಿದು ನಾಶವಾಗುವುದನ್ನು ಸಮರ್ಥವಾಗಿ ಈ ಕವನದ ಕೊನೆ ನುಡಿಯಲ್ಲಿ ಬಿಂಬಿಸಿದ್ದಾರೆ.

'ಹ್ಯಾಂಗಾರೆ ಕುಣಿಕುಣಿದು
ಮಂಗಾಟ ನಡೆದಾಗ
ಅಂಗಾತ ಬಿತ್ತೋ, ಹೆಗಲಲಿ ಎತ್ತೋ.'

## VII ಬಾಳಗರುಡಿ

ಬೇಂದ್ರೆಯವರ 'ಬಾಳಗರುಡಿ' (ರಚನೆ : ೧೯೩೫) ಕವನ ವೈಚಾರಿಕ ಕ್ರಾಂತಿಯ ಕಹಳೆಯಾಗಿದೆ. ಹಳೆಯ ಸಾಂಪ್ರದಾಯಿಕ ಮೂಢನಂಬಿಕೆಗಳನ್ನು ಕಿತ್ತೆಸೆಯಲು ಆಹ್ವಾನ ನೀಡಿದೆ. ನಮ್ಮ ಭೂಮಿಯ ಮೇಲಿನ ಶೋಧದ ಮಿತಿಸಾಕು; ಮುಗಿಲಿನ ಕಡೆ ಮುಖಮಾಡಿ ಹೊಸ ಶೋಧ ಕೈಗೊಳ್ಳಿ ಎಂದು ಸಾರಿದೆ. ಕಾಣುವ ಸೂರ್ಯ ಚಂದ್ರರ ಬರಿ ಬಣ್ಣನೆಗಿಂತ ಅದನ್ನೂ ಒಳಗೊಂಡು ವಿಶ್ವದ ವೈಜ್ಞಾನಿಕ ಸಂಶೋಧನೆ ಆಗಲಿ. ಆಗ ಹೊಸಕಾಲ ಉದಯಿಸುತ್ತದೆ ಎಂದು 'ಬಾಳಗರುಡಿ'ಯಲ್ಲಿ ಸಾಧನೆ ಮಾಡಲು ಯುವಕರಿಗೆ ಕರೆನೀಡಿದ್ದಾರೆ.

ಈ ಜೀವನ ಎಂಬುವುದು ಒಂದು ವ್ಯಾಯಾಮ ಶಾಲೆ ಇದ್ದಂತೆ. ಈ ಪ್ರಕೃತಿಯ ಗೂಢವನ್ನು ಶೋಧಿಸುತ್ತ ಅದರ ಫಲವನ್ನುಂಡು ಗಟ್ಟಿಗರಾಗಬೇಕಾದ ನೆಲೆ. ಅಂತಹ ನೆಲೆಯ ಒಬ್ಬ ವ್ಯಕ್ತಿ ಕಹಳೆ ಹಿಡಿದು ಕೂಗುತ್ತಿದ್ದು ಅವನು ಸ್ವತಃ ಕವಿಯೇ ಆಗಿದ್ದಾನೆ. ಅವನು ಎಚ್ಚರದ ನುಡಿಗಳನ್ನು ಸಾರಿಹೇಳುತ್ತಿದ್ದಾನೆ.

ಹಳೆಯ ಸಂಪ್ರದಾಯದ, ಜಡ್ಡುಗಟ್ಟಿದ, ಸುಕ್ಕಾದ, ನೆರೆಬಿದ್ದ ವೃದ್ಧ ವಿಚಾರ ನಂಬಿಕೆಗಳನ್ನು ಹರೆದು, ತೊರೆದು ಬನ್ನಿ. ಸದಾ ಸುತ್ತುವ ಈ ಭೂಮಿಯನ್ನು ಜಟ್ಟಿಯಂತೆ ಮೆಟ್ಟನಿಂತು ಆಲೋಚನೆಯ ಹರಿವ ನೀರಾಗಿ; ಉರಿವ ಬೆಳಕಾಗಿ ಹಿರಿಯ ಚಿಂತನೆಯ ಉಸಿರಾಡಿರಿ. ಈ ಜೀವನ 'ಬೆಸೆದ ಉಸಿರ ಸೆರೆ.' ಅದನ್ನು ನಂಬದೆ ಸಾಹಸಿಗಳಾಗಿ ಹೊಸ ಚಿಂತನೆಯ ಬೀಡಾಗಿರಿ, ಸಂಶೋಧನಾ ವ್ಯಕ್ತಿಗಳಾಗಿರಿ ಎಂದಿದ್ದಾನೆ.

ಕವನದ ಎರಡನೆಯ ಭಾಗದಲ್ಲಿ ಸಂಶೋಧನಾ ಕ್ಷೇತ್ರ ಎಷ್ಟು ವಿಶಾಲವಾಗಿದೆ ಎಂಬುದರ ಸೂಚನೆಯನ್ನು ನೀಡಿದ್ದಾನೆ. ಅದಕ್ಕೆ ಬೇಕಾದ ಬೌದ್ಧಿಕ ವಿಕಾಸ, ಕ್ಷಮತೆ ಮನುಜನಲ್ಲಿದೆ. ಅದು ಒಂದು ಸಾಹಸವಾಗಿ ಹರಿಯಲಿ ಎಂದು ಆಶಿಸಿದ್ದಾನೆ. ಹಳೆಯ ಅಪ್ರಯೋಜಕ ಭಾವನೆ, ಯೋಜನೆಗಳನ್ನು ಹೂತು, ಆಕಾಶದಲ್ಲಿರುವ

ನೂರು ಬಿಲಿಯನ್ ನಕ್ಷತ್ರಗಳಲ್ಲಿ ಸೂರ್ಯ ಒಂದೆಂದು ತಿಳಿದು ಆಕಾಶಗಂಗೆಯ ಶೋಧ ನಡೆಸಿರಿ. ಮನುಜಕುಲದ ಉಳಿವಿಗೆ ಚಂದ್ರ ಸೂರ್ಯರ ಅಧ್ಯಯನವಷ್ಟೇ ಸಾಲದು; ಬಂದಿದೆ ಬೇರೆ ಚಿಂತನಾಶೋಧನಾಕಾಲ. ಅದಕ್ಕೆ ಸಜ್ಜಾಗಿ ಎಂದು ವಿಶ್ವದ ಆಶಾ ಕಹಳೆಯನ್ನು ಊದಿದ್ದಾನೆ. ವಿಶ್ವ ಮಾನವ ಕಲ್ಪನೆಯ 'ಬಾಳಗರುಡಿ'ಗೆ ಸಜ್ಜಾಗಿ ಎಂದಿದ್ದಾನೆ.

'ಮುಗಿಲಿಗೆ ನಿಚ್ಚಣಿಕೆಬೇಕು
ಹಳೆಯ ಹಾಳ ಹೂಳ ಬೇಕು
ಬಾಲಚಿಕ್ಕೆ ಕೀಳಬೇಕು
ಗಂಗೆ ಬಸಿರ ಊಳ ಬೇಕು
ಚಂದ್ರ ಸೂರ್ಯ ಸಾಲವೋ, ಬಂತು ಬೇರೆ ಕಾಲವು'

## VII ಸಿಟ್ಟು – ಸಾಂತಿ

ಬೇಂದ್ರೆಯವರು ಸಾಮಾಜಿಕ ಸಮಸ್ಯೆಗಳಿಗೆ ಕಾರಣಗಳನ್ನು ಹುಡುಕುತ್ತ ಅದರ ಮೂಲ ಮತ್ತು ವ್ಯಾಪ್ತಿ ಸಿರಿವಂತರ ಸಿಟ್ಟಿನಲ್ಲಿದೆ ಎಂದಿದ್ದಾರೆ. ಅರಿಷಡ್ವರ್ಗಗಳಲ್ಲಿ ಎರಡನೆಯದಾದ ಕ್ರೋಧವು ಅಧಿಕಾರ, ಅಂತಸ್ತು ಉಳ್ಳವರ ವರ್ಗದಲ್ಲಿ ಮನೆಮಾಡಿ ಅವರನ್ನು ಪೋಷಿಸುತ್ತಿರುತ್ತದೆ. ಅದು ತಾಮಸ ಮತ್ತು ರಾಜಸಗುಣದ ಪೋಷಕನೆಲೆ. ಅದು ಅಸಹಾಯಕ ಬಡವ, ನಿರ್ಗತಿಕ ದೀನದಲಿತ, ಕೂಲಿಕುಂಬಳಿಯವರನ್ನು ಶೋಷಿಸುತ್ತಿರುತ್ತದೆ. ಅವರು ತಮ್ಮ ಹೊಟ್ಟೆ ಬಟ್ಟೆಗಾಗಿ ಕೇಳಿ ತುಸು ಪ್ರತಿಭಟಿಸಿದರೆ ಅವರನ್ನು ತುಳಿದು ಹೊಸಕಿ ಹಾಕಲು ಸಿರಿವಂತರ ಸಿಟ್ಟು ಕಾದುಕುಳಿತಿರುತ್ತದೆ. ದಮನಗೊಳಿಸುತ್ತಲೇ ಇರುತ್ತದೆ. ಬೇಂದ್ರೆಯವರಿಗೆ ಪ್ರತಿವ್ಯಕ್ತಿ ಮಾನವೀಯ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡಾಗ ಸಾಮಾಜಿಕ ಸಮಸ್ಯೆಗಳು ಬಗೆಹರಿಯುತ್ತವೆ ಎಂಬ ಸ್ಪಷ್ಟತೆ ಇತ್ತು. ಹಾಗಾಗಿ ಅವರು ಪ್ರತಿವ್ಯಕ್ತಿಯು ಕಾಯ, ವಾಚಾ, ಮನಸಾ ಮಾನವನಾಗುವ ಪ್ರಕ್ರಿಯೆಗೆ ಒಳಗಾಗುವ ಬಗ್ಗೆ ಚಿಂತಿಸುತ್ತಿದ್ದರು. ಅದರ ಫಲವೇ 'ಸಿಟ್ಟು–ಶಾಂತಿ' ಎಂಬ ಅವರ ಕಲ್ಪನೆಯ ಕವನ. ಈ ಕವನದ ಭಾವಸಂದರ್ಭ: 'ಜಗತ್ತು ಬೇಡುತ್ತಿದೆ ಶಾಂತಿಯನ್ನು, ಜಗತ್ತಿನ ನಿಯಂತ್ರಣಕಾರರು ಅದಕ್ಕೆ ಕೊಡುತ್ತಾರೆ ಸಾಂತಿಯನ್ನು. ರಣದ ಕೊನೆಗೆ ಬರುತ್ತದೆ ಹೆಣದ ಶಾಂತಿ. ಕಾಮಕ್ರೋಧಾವಿಷ್ಟರಾದವರು ರಾಜ್ಯಾಧಿಕಾರಕ್ಕೆ ಅಪಾತ್ರರಾಗುತ್ತಾರೆ. ನಿಷ್ಕರುಣಿಗಳು, ಲೋಭಿಗಳು ಜಗತ್ತಿನ ಪಾಲನೆ–ಪೋಷಣೆ ಮಾಡಲಾರರು.'

ಬೇಂದ್ರೆಯವರು 'ಶಾಂತಿ'ಗೆ ಬದಲಾಗಿ 'ಸಾಂತಿ' ಅಂದರೆ ಅಶಾಂತಿಯನ್ನು ಹರಡುತ್ತಿರುವ ರಾಜ್ಯ ವ್ಯವಸ್ಥೆಯ ಯಜಮಾನರ ಬಗ್ಗೆ ಸೂಕ್ಷ್ಮವಾಗಿ ಜನರನ್ನು

ಎಚ್ಚರಿಸಿದ್ದಾರೆ. ಈ ಕಥನಕವನದಲ್ಲಿ ಹೊಲೆಸಿಟ್ಟು ಶಿವನನ್ನು ತನಗೊಬ್ಬ ಹೆಂಡತಿಯನ್ನು ಬೇಡುತ್ತದೆ. ಶಿವ ಬ್ರಹ್ಮನನ್ನು ಸಿಟ್ಟಿಗೆ ತಕ್ಕ ಹೆಂಡತಿಯನ್ನು ಸೃಷ್ಟಿಸಲು ಹೇಳುತ್ತಾನೆ.

ಬ್ರಹ್ಮನಿಗೆ 'ಪ್ರಳಯದ ಬಸಿರೊಳಗೊಂದು ಗೊರಟಸಿಕ್ಕಿತು'. ಅದನ್ನೇ ಹೆಣ್ಣಾಗಿ ಸೃಷ್ಟಿಸಿ ಸಿಟ್ಟಿಗೆ ನೀಡಿದ. ಪ್ರಳಯದಲ್ಲಿ ಹುಟ್ಟಿದ್ದು ಅಶಾಂತಿ. ಅದೇ ಬೇಂದ್ರೆಸೃಷ್ಟಿಸಿದ 'ಸಾಂತಿ'. 'ಅವಳು ಶಾಂತಿಯ ಮಲತಂಗಿ.' ಅವಳನ್ನು ಬೇಂದ್ರೆಯವರು ಬಲ್ಲಿದರ ತೊತ್ತು, ಬಡವರ ಮೃತ್ಯು ಎಂದು ಕರೆದಿದ್ದಾರೆ.

'ಸಿಟ್ಟಪ್ಪ ಸಾಂತಿಯನಪ್ಪಲುಬಂದ'. ಹೊಸ ಜೋಡಿಗೆ ಪುಷ್ಪವೃಷ್ಟಿ ಸುರಿಸುವುದು ರೂಢಿ. ಆದರೆ 'ಸಿಟ್ಟು-ಶಾಂತಿ'ಯ ಜೋಡಿ ಉಂಟು ಮಾಡುವ ಲೋಕ ಕಂಟಕವನ್ನು ನೆನೆದು 'ಕಂಡವರು ಮಾಡಿದರು. ಅಶ್ರುವೃಷ್ಟಿಯನು' ಎಂದು ಬೇಂದ್ರೆ ಹೇಳಿದ್ದಾರೆ. ಜಗದ ಜನರ ನೋವು, ವೇದನೆಯನ್ನೆಲ್ಲ 'ಅಶ್ರುವೃಷ್ಟಿ' ಪ್ರತಿಮೆಯಲ್ಲಿ ಮಡುಗಟ್ಟಿಸಿದ್ದಾರೆ.

## ಸಾಂತಿ

'ಶಾಂತಿಯ ಮಲತಂಗಿಯಾದ ಸಾಂತಿ'ಯನ್ನು ಸೃಷ್ಟಿಸುವ ಬಗೆಯಲ್ಲಿಯೇ ಅದರ ಸರ್ವನಾಶಕಾರಿ ಲಕ್ಷಣಗಳನ್ನು ಬೇಂದ್ರೆ ಬಿಂಬಿಸಿದ್ದಾರೆ. ಅಶಾಂತಿಯು ಉಂಟುಮಾಡುವ ಅಲ್ಲೋಲ ಕಲ್ಲೋಲದ ಕಾರಣದಿಂದ ಅದರ ಬಗ್ಗೆ ಅವರಿಗೆ ಜಿಗುಪ್ಸೆ ಇದೆ. ಸಿಟ್ಟು ಮತ್ತು ಅಶಾಂತಿಯ ಸಂಲಗ್ನವಾದಾಗ ಅಪ್ರಸನ್ನ ಮನದಿಂದ ಅಮಂಗಲವಾಗುತ್ತದೆ ಎಂಬ ತಾತ್ವಿಕ ಚಿಂತನೆ ಈ ಕಾವ್ಯದಲ್ಲಿದೆ.

'ಕುಣಿ ಮಣ್ಣುಕೊಟ್ಟವು ಮಾಡಲುನಿನ್ನ,
ಚಿತೆ ಬೆಂಕಿಯಿಕ್ಕಿತು, ಅದೇ ನಿನ್ನ ಬಣ್ಣ
ಗೋರಿಯ ಹೂಗಳು ಆದವು ಕಣ್ಣು,
ಹುಟ್ಟಿದೆ ಜಗದೊಳಗೆ ನೀ ಹೊಸ ಹೆಣ್ಣು'

ಅಂತಹ 'ಸಾಂತಿ'ಯನ್ನು ಕಂಡು ಕವಿ ಸಾವಿನ ಬಗ್ಗೆ ರೂಪಕಾತ್ಮಕವಾಗಿ 'ಸಾವೆ ಸತ್ತಿತೋ ಏನೋ? ಹತ್ತಿತು ಸಮಾಧಿ' ಎಂದಿದ್ದಾರೆ. ಈ ಕವನದ ಪ್ರತಿಮೆಗಳು ಅಶಾಂತಿಯ ಕ್ರೂರ ಭಯಂಕರತೆಯನ್ನು ಸಮರ್ಥವಾಗಿ ಚಿತ್ರಿಸಿವೆ. ಆ 'ಸಾಂತಿ'ಯನ್ನು ಕಂಡು ಕವಿನುಡಿದಿದ್ದಾರೆ :

'ನಿನ್ನ ಹತ್ತಿರ ಯಾರೂ ಹಾಯುವದಿಲ್ಲಾ
ನೀನೇ ಎಲ್ಲರನ್ನು ಹಾಯುವಿಯಲ್ಲ!'

ಈ ಬಗೆಯ 'ಸಾಂತಿ'ಯನ್ನು ಕಾವ್ಯದಲ್ಲಿ ಸೃಷ್ಟಿಸಿದ ಬೇಂದ್ರೆಯವರ ಮನಸ್ಸಿನಲ್ಲಿ ಭೂಮಿತಾಯಿಯ ಶಾಂತಿಯನ್ನು ಕದಡಿದ ಕ್ರೂರಮಾನವರ ಒಳಮರ್ಮದ ಅನಾವರಣವಿದೆ. ಬೇಂದ್ರೆಯವರ ಮನುಕುಲದ ಶಾಂತಿಯ ಕಾಳಜಿ ಈ ಕಾವ್ಯದ ಹಿನ್ನೆಲೆಯಲ್ಲಿದೆ.

## XI ಮೊದಲಗಿತ್ತಿ

'ನನ್ನ ಭಾವನೆಯಲ್ಲಿ ಸ್ಫೂರ್ತಿಯಸೆಲೆತಾಯಿ' ಎಂದು ಹೆತ್ತತಾಯಿಯನ್ನು ಗೌರವಿಸುತ್ತ 'ಅಂಬಿಕಾತನಯದತ್ತ'ನಾದ ಬೇಂದ್ರೆಯವರು ಮಾತೃ ಆರಾಧಕರು. ಅವರಿಗೆ ಸಚ್ಚಿದಾನಂದತ್ವದ ಅರಿವು ಎಂದರೆ ಭೂಮಿ. 'ಬಂತೆಲ್ಲ ನೆಲದ ಬಸಿರಿಂದ। ಮನೆಯು ನೆಲದಿಂದ। ಅನ್ನ ಮಣ್ಣಿಂದ। ಮೈಯು ಅದರಿಂದೋಂ ಸಚ್ಚಿದಾನಂದ.' ಅವರು '೧. ದೇಹ ಕೊಟ್ಟ ತಾಯಿ; ೨. ಮಾತು ಕಲಿಸಿದ ತಾಯಿ; ೩. ಸಂಸ್ಕಾರ ಸಂಪನ್ನ ಮಾಡಿದ ತಾಯಿ; ೪. ಭೂಮಂಡಲದ ಮಾನವತೆಯಲ್ಲಿ ನೆಲಸಿದ ತಾಯಿ; ೫. ವಿಶ್ವೋದರದಲ್ಲಿ ಧರಿಸಿದ ತಾಯಿ – ಈ ಐದು ಐದೆಯರು ದತ್ತನ ತಾಯಂದಿರು. ಇದು ಪಂಚಕೋಶಗರ್ಭ' ಎಂದು ಹೇಳಿಕೊಂಡಿದ್ದಾರೆ. ಭೂಮಂಡಲದ ಮಾನವತೆಯಲ್ಲಿ ನೆಲೆಸಿದ ತಾಯಿಯು ಅವರಿಗೆ ಈ ಲೋಕದ ಸೃಷ್ಟಿಯ ಆದ್ಯಳು. ಅವಳೇ ಈ ಜಗತ್ತಿನ ಬೇರು ತುದಿ ಎಲ್ಲವೂ. ಆದುದರಿಂದ ಈ ಭೂಮಿತಾಯಿಯನ್ನು ಅವರು 'ಮೊದಲಗಿತ್ತಿ' ಎಂದು ಅರ್ಥಪೂರ್ಣವಾಗಿ ಕರೆದಿದ್ದಾರೆ. ಕುಂಬಾರಗಿತ್ತಿ ಕುಂಬಾರಿಕೆಯ ಕಲೆಯನ್ನು ಅರಿತವಳಂತೆ, ಈ ಜೀವ ಸೃಷ್ಟಿಯ ಕಲೆಯನ್ನು ಅರಿತವಳು ಮೊದಲಗಿತ್ತಿ. ಭೂಮಿ ತಾಯಿ ಚಿರಂತನ ಮೊದಲಗಿತ್ತಿ–ಮದುವಣಗಿತ್ತಿ; ಮದುಮಗಳು; ನವವಧು.

ಬೇಂದ್ರೆಯವರು ಮಾತೃಪ್ರಧಾನ ಚಿಂತನೆಯ ಪ್ರೇಮ, ವಾತ್ಸಲ್ಯ, ದಯೆ, ಮಧುರತೆ, ಸ್ನೇಹಭಾವದ ಆರಾಧಕರು. ಈ ನೆಲದಲ್ಲಿ ಪಿತೃಪ್ರಧಾನ ಆಳ್ವಿಕೆ ಇದ್ದು, ಅದು ತನ್ನ ಕಾಮ, ವೀರ, ಧೈರ್ಯ, ಅಹಂಭಾವ, ಅತ್ಯಾಚಾರದಲ್ಲಿ ವಿಜೃಂಭಿಸಿರುವುದರಿಂದ ಅಳಿಯುತ್ತಿದೆ. ತಾಯಿಯ ಸಂಸ್ಕೃತಿ ಪೋಷಕತತ್ವ ಉಳಿಯುತ್ತಿದ್ದರೆ; ಪಿತೃಪ್ರಧಾನ ಭೌತಿಕ ವಸ್ತುಭೋಗದ ನಾಗರಿಕತೆ ಅಳಿಯುತ್ತಿದೆ. ಇವೆರಡರ ವೈರುಧ್ಯವನ್ನು 'ಮೊದಲಗಿತ್ತಿ' ಕವನದಲ್ಲಿ ಪ್ರತಿಮಾತ್ಮಕವಾಗಿ ಚಿತ್ರಿಸುತ್ತ ಅದರೊಡಲಿನ ಪ್ರೇಮ, ತೃಪ್ತಿ, ಆನಂದದ ಮುಖದರ್ಶನಕ್ಕೆ ಕವಿ ಆಶಿಸಿದ್ದಾರೆ.

'ಮೊದಲಗಿತ್ತಿಯಂತೆ ಮೆರೆಯುವಿಯೇ ತಾಯಿ।
ಮೊದಲಗಿತ್ತಿಯಂತೆ ಮೆರೆಯುತಿಹೆ'

ಎಂಬ ಕವನದ ಪಲ್ಲವಿಯು ಭೂಮಿತಾಯಿಯು ಯಾವಾಗಲೂ 'ಮೊದಲಗಿತ್ತಿ'ಯೇ ಎಂಬುದನ್ನು ಒತ್ತಿ ಹೇಳಿದೆ. ಹಾಗೆ ಹೇಳುತ್ತ ಸಾಗುವ ಆರು ನುಡಿಗಳಲ್ಲಿ ಮೊದಲ ಎರಡು ನುಡಿಗಳು ಈ ಲೋಕದ ಚರಿತ್ರೆಯುದ್ದಕ್ಕೂ ರಾಜರಾಗಿ ಆಳಿದ ಚರಿತ್ರಹೀನರಾದವರನ್ನು ವ್ಯಂಗ್ಯವಾಗಿ ಚಿತ್ರಿಸಿದೆ. ಭೂಪತಿಗಳೆನಿಸಿದ ಅವರನ್ನು ಪುಂಡರು, ತಾಯಿಗ್ಗಂಡರು ಎಂಬ ಪ್ರತಿಮೆಯಲ್ಲಿಯೇ ಭೂಪತಿಗಳ ಬರ್ಬರ ಆಳ್ವಿಕೆಯನ್ನು ಧ್ವನಿಸುತ್ತಿದೆ. ಅಂತಹವರ ನೆತ್ತರ ರುಚಿನೋಡಿ ಅಂತಹ ಪಾತಕಿಗಳನ್ನು ತನ್ನ ಮಡಿಲಲ್ಲಿ ಮಲಗಿಸಿಕೊಂಡಿರುವ 'ಮೊದಲಗಿತ್ತಿ' ಆರಂಭದ ಬೆಳೆಗೂ ಅಂತ್ಯದ ಅಳಿವಿಗೂ ಕಾರಣ ಎಂಬುದನ್ನು ಸಂಕೇತಿಸಿದೆ.

ಪಿತೃಪ್ರಧಾನ ಶೌರ್ಯದ ವೀರತನ ವೈರತ್ವಕ್ಕೆ ಕಾರಣವಾಗಿ, ನಾಗರಿಕ ಭೋಗ ಲೋಕದಲ್ಲಿ ತಾನೇ ಶ್ರೇಷ್ಠ ಎಂದು ಮೆರೆದ ವೀರರು ತಲೆಕೆಳಕಾಗಿ ಇನ್ನಿಲ್ಲವಾದರು. 'ನಿನ್ನ ತೇಜದ ಮುಂದೆ ರಾಜ ತೇಜವುಕೂಸು!' ಎಂಬ ಪ್ರತಿಮೆ ಭೂಮಿತಾಯಿಯ 'ಮೊದಲಗಿತ್ತಿ'ತನದ ಸೃಜನ ಹಾಗೂ ಪೋಷಕಶಕ್ತಿಯನ್ನು ಅಭಿವ್ಯಕ್ತಿಸಿದೆ.

ಈ ಜಗತ್ತಿನಲ್ಲಿರುವ ಸೂಕ್ಷ್ಮನಿರುಪದ್ರವಿ ಪ್ರಾಣಿ ಪಕ್ಷಿಗಳನ್ನು; ಮುಗ್ಧ ಅಸಹಾಯಕ ಜನಸಾಮಾನ್ಯರನ್ನು; ದುರ್ಬಲ ಸ್ತ್ರೀಯರನ್ನು ಆಕ್ರಮಣ ನಡೆಸಿ ಇಲ್ಲವಾಗಿಸುವ ರಾಕ್ಷಸಪ್ರವೃತ್ತಿ ಆಳುವವರದಾಗಿದೆ. ಅದು ಅರಣ್ಯದ ಕ್ರೂರ ಹಿಂಸ್ರಕ ಪ್ರಾಣಿಗಿಂತಲೂ ಬೀಭತ್ಸವಾಗಿದೆ.

ರಜೋಗುಣದಿಂದ ಕ್ರೂರವಾದ ಆಳುವವರ ತಾಮಸ ಪ್ರವೃತ್ತಿಯ ಆಕ್ರಮಣ, ಹಿಂಸೆ, ಅತ್ಯಾಚಾರ ಸೃಷ್ಟಿನಾಶದ ರಕ್ತಹರಿಯುವಿಕೆಯನ್ನು ತಡೆಯಲು ಆಗಾಗ ದೇವತೆಗಳು ಅವತಾರವೆತ್ತಿದ್ದಾರೆ. ಹಾಗೆ ಅವತರಿಸಿದ ಪರಶುರಾಮನಂತಹವರ ಕೆನ್ನೀರ ಜಳಕಕ್ಕೆ 'ಮೊದಲಗಿತ್ತಿ' ತನ್ನ 'ಕೂದಲು ನೆನೆಯಲಿಲ್ಲ' ಎಂದು ಬೀಗುತ್ತಿದ್ದಾಳೆ. ಅವಳಿಗೆ ಮಾನವ ಕ್ರೌರ್ಯದ ರಕ್ತ ಪ್ರವಾಹ 'ಒಕ್ಕುಡಿತೆ, ಅರೆಮುಕ್ಕು.' ಅವೆಲ್ಲ ಅವಳಿಗೆ ಅಭಿಷೇಕ, ಎಣ್ಣೆಮಜ್ಜನವಾಗಿದೆ. ಅವಳು ರಕ್ತಸಿಕ್ತ ಕೈಯ 'ನೆತ್ತರ ಮೀಯಿಸುವ ಕೆಂಚರ ಕೈಯಿಳಿಸಿ' ಅವರ ರಕ್ತದಿಂದ ಅಭಿಷೇಕಗೊಳ್ಳುತ್ತಾಳೆ ಎಂಬ ಪ್ರತಿಮೆಗಳು– ಭೂಮಿತಾಯಿಯ ಕ್ರೌರ್ಯದ ಮುಖವನ್ನು ಪರಿಚಯಿಸುತ್ತಿದೆ. ಭೂಮಿತಾಯಿಯಲ್ಲಿ ರಕ್ಷಕಗುಣದಂತೆ ಭಕ್ಷಕಗುಣವೂ ಇದೆ. ರಕ್ಕಸರ ಭಕ್ಷಣೆ ಆಗಬೇಕು ಎಂಬ ಸೂಚನೆಯನ್ನು ಈ ಕಾವ್ಯ ನೀಡಿದೆ.

'ಅವತಾರಕೊಂದು ಅಭಿಷೇಕ ಮಾಡಿದರು
ಎಣ್ಣೆಮಜ್ಜನ ಬೇರೆ ಬೇಕೆನುವೆ

ನೆತ್ತರ ಮೀಯಿಸುವ ಕೆಂಚರ ಕೈಯಿಳಿಸಿ
ಮೊದಲಗಿತ್ತಿಯೆ ನೀನು ಮೆರೆಯುತಿಹೆ'

ಪಿತೃಪ್ರಧಾನ ವ್ಯವಸ್ಥೆಯ ಕ್ರೂರಿ ಪುರುಷ ತಾನು ತಾಯಿಯ ಕುವರ ಎಂಬ ಸತ್ಯವನ್ನು ಅರಿಯುವವರೆಗೂ ಆ ತಾಯಿ ಅವನನ್ನು ಸಂಹರಿಸುತ್ತಲೇ ಸಾಗುತ್ತಾಳೆ ಎಂಬ ಧ್ವನಿ ಈ ಮೇಲಿನ ನುಡಿಗಳಲ್ಲಿದೆ.

ಈ ಲೋಕದ ಮನುಜರು ತಾವು ಈ ಭೂಮಿತಾಯಿಯ ಮಕ್ಕಳೆಂದು ಮೊದಲು ತಿಳಿಯಬೇಕು. ಅಳುವವರು ಆ ಅರಿವನ್ನು ಹೊಂದಿ ನಡೆಯಬೇಕು. ಆಗ ಭೂಮಿತಾಯಿ 'ಮೊದಲಗಿತ್ತಿ' ತಾಯಿಯಾಗುತ್ತಾಳೆ. ಪ್ರೇಮದ ಸಾಕ್ಷಾತ್ಕಾರದಿಂದ ಜೀವನೋತ್ಸಾಹ, ಜೀವೋಲ್ಲಾಸದಿಂದ ತೃಪ್ತಿಹೊಂದಿ ಸಮೃದ್ಧಿಯಿಂದ ಬೀಗುತ್ತಾಳೆ. ಭೂಮಿಯ ಹಲವು ಫಲಗಳಲ್ಲಿ ಒಂದಾದ ಮನುಜರು ಅವಳ ಮಕ್ಕಳಾಗಿ ಬಾಳುವುದರಲ್ಲಿಯೇ ಈ ಲೋಕದ ಉಳಿವಿದೆ. ಆಗಮಾತ್ರ ಭೂಮಿ ಸಂಹಾರಕ ಶಕ್ತಿಯಾಗದೆ ಜೀವಪೋಷಕ ಶಕ್ತಿಯಾಗುತ್ತದೆ ಎಂಬ ತತ್ವವನ್ನು ಈ ಕವನ ಸಾರುತ್ತಿದೆ. ಶ್ರಾವಣ ಮಾಸದಲ್ಲಿ ಎಲ್ಲವನ್ನೂ ಕೊಚ್ಚಿ ಎಸೆಯುವ ರೌದ್ರಾವತಾರದಂತೆ ಜೀವಸೆಲೆ ಹೊಮ್ಮಿಸಿ ಫಲನೀಡುವ ಲಕ್ಷಣವೂ ಇದೆ. ಅಂತಹ ಮಂಗಲ ಲಕ್ಷಣ ಭೂಮಾತೆಯ ದೇವಗರ್ಭದಿಂದ ಹೊಮ್ಮಲಿ ಎಂದು ಕವಿ ಆಶಿಸಿದ್ದಾರೆ.

ಹಾಲಿನ ಹೃದಯಕೆ ಕುಬ್ಬುಸವನು ತೊಡಿಸಿ
ಹೂ ಮುಡಿಸಿಕೊಂಡೆಂದು ನೀನಲಿವೆ?
ಬಸಿರು ತುಂಬಲು ಹಸಿರುಡಿಗೆಯನುಟ್ಟೆಂದು
ವನವಾಸ ನವಮಾಸ ತೀರಿಸುವೆ?

ಮುನ್ನಿಲ್ಲ ಇನ್ನಾರೆ ಮಕ್ಕಳ ದಿನವೆಂದು
ಮೂಡೀತು ಹೇಳವ್ವ ಬಿನ್ನವಿಸುವೆ.
ಎಂದು ಮಂಗಲ ನಿನ್ನ ದೇವಗರ್ಭಕೆ? – ಇನ್ನೂ
ಮೊದಲಗಿತ್ತಿಯಂತೆ ಮೆರೆಯುತಿಹೆ.

## ೮. ಬುದ್ಧಿಯ ಅಥವಾ ಆತ್ಮದ ಅರಿವಿನ ಗೀತಗಳು

ಬೇಂದ್ರೆಯವರು ಭಕ್ತಕವಿಯಾಗಿ, ಸಾಧಕರಾಗಿ, ಆಧ್ಯಾತ್ಮಿಕ ಚಿಂತನೆಯನ್ನು ಕಾವ್ಯಾನುಭವವಾಗಿಸಿದ ಸಿದ್ಧರು. ಆತ್ಮ-ಪರಮಾತ್ಮನ ಆಲೋಚನೆ ಅವರಿಗೆ ಒಂದು ಅನುಭವವಾಗಿ ಅದರ ಅಭಿವ್ಯಕ್ತಿ ಕಾವ್ಯವಾಗಿ ಹರಿದಿದೆ. ಅವರು ಚಿದಂಬರ ದೀಕ್ಷಿತ, ಗೊಂದವಲೇಕರ ಮಹಾರಾಜ, ಅಕ್ಕಲಕೋಟ ಮಹಾರಾಜ, ಶ್ರೀ ಅರವಿಂದ ಮತ್ತು ಶ್ರೀಮಾತೆ, ಗುಳುವಣಿ ಮಹಾರಾಜ, ಪ್ರಭಾಕರ ಮಹಾರಾಜ, ನಿತ್ಯಾನಂದ ಉಪಳೇಕರ ಮಹಾರಾಜರನ್ನು ಗುರುಗಳೆಂದು ಸ್ವೀಕರಿಸಿದ್ದರು. ಅವರ ಅಧ್ಯಾತ್ಮ ಚಿಂತನಾ ಕವನಗಳನ್ನು ಮಾಸ್ತಿಯವರು 'ಬುದ್ಧಿಯ ಅಥವಾ ಆತ್ಮದ ಅರಿವಿನ ಮಾತನ್ನು ಕೊಡುವಗೀತ' ಎಂದು ಕರೆದಿದ್ದಾರೆ. ಬೇಂದ್ರೆಯವರು ಅಧ್ಯಾತ್ಮಸಾಧನಾ ಮಾರ್ಗದ ಶೋಧದಲ್ಲಿಯೇ ಆನಂದವನ್ನು ಅನುಭವಿಸಿದ್ದರು. ಅದನ್ನು ಕುರಿತು ಪು.ತಿ.ನ. ಅವರು 'ಆಧ್ಯಾತ್ಮಿಕ ರಚನೆಗಳು ಅವರ ಅಸಾಧಾರಣ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುತ್ತವೆ. ಅವನ್ನು ಅರ್ಥೈಸುವುದು ಕಷ್ಟ; ಉಪೇಕ್ಷಿಸುವುದೂ ಸಾಹಸ. ಮಹಾನುರಾಗಿಯಲ್ಲಿ ಆಗಾಗ ಭುಗ್ಗನೆ ಏಳುವ ಅಧ್ಯಾತ್ಮಜ್ವಾಲೆಗಳೆಂದು ಅವನ್ನು ಕರೆಯಬಹುದು'[೧] ಎಂದಿದ್ದಾರೆ.

ಬೇಂದ್ರೆಯವರ ಈ ಬಗೆಯ ಗೀತಗಳನ್ನು ಅರಿಯಬೇಕಾದರೆ ಅವರೇ ತಿಳಿಸಿರುವಂತೆ ಭವದ ಅನುಭವದ ನಾದದಿಂದ ಆತ್ಮಾನಂದನ ನೆಲೆಗೆ ಉನ್ಮುಖವಾಗಿ ಏರಬೇಕು. ಅದಕ್ಕೆ ಬೇಕಾದ್ದು :

'ಅಂತರಂಗದಾ ಶೋಧಬೇಕು
ಪರಬ್ರಹ್ಮದಾ ಬೋಧಬೇಕು
ಎಂದಿಗು ಶ್ರೀಗುರುಪಾದಬೇಕು
ನಾದಬೇಕು ನಾದಬೇಕು ತುದಿಮುಟ್ಟಾನು ನಾದಬೇಕು'[೨]

### I ನಾಲಗೆ

ದೇಹಧಾರಿಯಾದ ಜೀವಿ ಲೌಕಿಕ ಸುಖಭೋಗದ ಮಿತಿ ಅರಿತು; ತನ್ನಲ್ಲೇ ಅಡಗಿರುವ ಪರಮಾತ್ಮನನ್ನು ತಿಳಿದು ಅಲೌಕಿಕದತ್ತ ಸಾಗಿದ್ದನ್ನು 'ನಾಲಗೆ' (ರಚನೆ: ಸಿಕಂದ್ರಾಬಾದ್-೧೯೨೨) ಕವನ ಚಿತ್ರಿಸಿದೆ. ಇದು ಬೇಂದ್ರೆಯವರ ಅಧ್ಯಾತ್ಮ ಚಿಂತನೆಯ ಪ್ರಾರಂಭದ ಕವನವಾಗಿದೆ.

---

೧. ಪು.ತಿ.ನರಸಿಂಹಾಚಾರ್, 'ಕವಿಚೇತನ ಮೈತ್ರಿ : ದೈವಯೋಗ'; ದ.ರಾ.ಬೇಂದ್ರೆ, ನಾದಲೀಲೆ, ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೮೪, ಪು. ೨೮.

೨. ದ.ರಾ.ಬೇಂದ್ರೆ, ಅರಳುಮರಳು, ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೫೫, ಪು. ೩೮೩.

ಈ ಕವನದ ಮೊದಲ ನುಡಿ ದೇಹದ ನಶ್ವರತೆಯನ್ನು, ಆತ್ಮದ ಶಾಶ್ವತತೆಯನ್ನು; ಇಹದ ಕ್ಷಣಿಕತೆಯನ್ನು, ಪರದ ಅನಂತತೆಯನ್ನು ಚಿತ್ರಿಸಿದೆ. ಜೀವಿಯ ಬಾಹ್ಯಶರೀರವು ಹೊರಬೆಳಕಿನಿಂದ ಬೆಳಗುವಂತಹದು, ಸ್ವಯಂ ಪ್ರಕಾಶವಿಲ್ಲದ್ದು. ಅದರ ಒಡವೆಗಳು ಅತಿಯಾದ ಮಿತಿಯಿಂದ ಕೂಡಿ ಕ್ಷೀಣಿಸುವ ಲಕ್ಷಣ ಹೊಂದಿರುವುದು ಆಗಿದೆ. ಆದರೆ ಜೀವಿಯ ಅಂತರ್ಯದ ಆತ್ಮದ ಬೆಳಕು ಸ್ವಯಂ ಪ್ರಕಾಶವಾದುದು. ಅದು ತನ್ನದೇ ಹೊಳಪಿನಿಂದ ವಿಶಾಲವಾಗಿ ಬೆಳಗುವ ಸ್ಫಟಿಕದಂತಿದೆ. ಇದು ಜೀವಿಯ ಬಾಹ್ಯ ಮತ್ತು ಅಂತರ್ಯದ ಅರಿವು.

'ಮಂದವಾಗುತ ಬರಲು ಮುಂದಿರುವ ಒಡವೆಗಳು
ಕಂದಿ ಕುಂದುತ ಬಂತು ಕಣ್ಣಬೆಳಕು.
ಚೆಂದವೇರುತ ಬಂತು ಬೇರೊಂದು ಬಯಲಿನಲಿ
ಅಂದಕಟ್ಟಿನ ಕಟ್ಟು ಹಳಕು–ಹಳಕು'

ಎರಡನೇ ನುಡಿ ಜೀವಿಯ ದೇಹ ಪಡೆದ ಐಹಿಕ ಸುಖಭೋಗ ಕ್ರಮೇಣ ಮಸುಕಾಗುವುದನ್ನು ಚಿತ್ರಿಸಿ; ಒಳ ಆತ್ಮದ ಆಂತರಿಕ ಶಕ್ತಿ ನಗೆಯಮಿಂಚಾಗಿ ಯಾವುದನ್ನೂ ತನ್ನ ಸತ್ತ್ವದಿಂದ ಪರೀಕ್ಷಿಸಿ ತಿಳಿದು ಹೊಳೆಯುವುದನ್ನು ವರ್ಣಿಸಿದೆ.

ಮೂರನೇ ನುಡಿಯಲ್ಲಿ ಭೌತಿಕದೇಹದ ಮಿತಿ ಅರಿತ ಜೀವಿಯು ಹಕ್ಕಿಯಾಗಿ, ತನ್ನ ಭಾವದ ರೆಕ್ಕೆಯೊಡನೆ ಹಾರಿದ್ದಾನೆ. ಮುಗಿಲಲ್ಲಿ 'ನಕ್ಕು ನಲಿಯುವ ಚುಕ್ಕಿಯೆರಡು' ಕಂಡು ಹಿಗ್ಗಿದ್ದಾನೆ. ದೇಹದ ಒಡವೆಗಳ ಮಿತಿ ಅರಿತ ಜೀವಿ 'ದ್ವಾಸುಪರ್ಣಾ' ಎಂಬ ಚಿಕ್ಕೆಗಳಂತೆ ಹೊಳೆವ ಹಕ್ಕಿಗಳೆರಡನ್ನು ಕಂಡಿದ್ದಾನೆ. ಅವು ಅವನ ದೇಹವನ್ನು ಆಲಂಗಿಸಿರುವ ಜೀವಾತ್ಮ, ಪರಮಾತ್ಮ ಎಂಬ ಹಕ್ಕಿಗಳು. ಅವು ಸದಾ ಜೊತೆಯಲ್ಲಿದ್ದು; ಜೀವಾತ್ಮ ಅನುಭವಿಸುವ ಸುಖಭೋಗದ ಮಿತಿಗಳನ್ನು ಪರಮಾತ್ಮ ಸಾಕ್ಷಿಯಾಗಿ ನೋಡಿ, ಅದು ಸರಿಯಲ್ಲವೆಂದು ತಿಳಿಸುತ್ತಿರುತ್ತದೆ. ಭೋಗಾಸಕ್ತಿಗೆ ಒಳಗಾದ ಜೀವಾತ್ಮ ಅದರ ಮಾತು ಕೇಳದೆ ಕಷ್ಟ ಪರಂಪರೆಗೆ ಒಳಗಾಗುತ್ತದೆ. ಆದರೆ ಆ ಸಖ ಪರಮಾತ್ಮನ ಎಚ್ಚರಿಕೆ ಬೋಧವಾದಾಗ ಜೀವಾತ್ಮ ಉನ್ಮುಖನಾಗುತ್ತಾನೆ. ಅಂತಹ ಬೋಧ ಈ ಕವನದ ಸಾಧಕ ಜೀವಿಗೆ ಆಗಿದೆ. ಆ ಅನುಭವದಿಂದ ಅವನಿಗೆ 'ಕಕ್ಕುಲತೆ ಹಿಗ್ಗಾಗಿ ಉಕ್ಕಿ ಉಕ್ಕಿ' ಹರಿದಿದೆ.

ಅಂತಹ ಹಕ್ಕಿಗಳು ತನ್ನಲ್ಲಿವೆ ಎಂದು ತಿಳಿದಾಕ್ಷಣ ಜೀವಿ ಆ ಜ್ಞಾನ ದೊರಕಿಸಿಕೊಟ್ಟ ಗುರುವಿಗೆ ವಂದಿಸಿ; ಸನ್ಮಾರ್ಗ ಹಿಡಿದು ಆತ್ಮ ಸಾಕ್ಷಾತ್ಕಾರದತ್ತ ಸಾಗುವುದಾಗಿ ತಿಳಿಸುತ್ತಾನೆ. ಲೌಕಿಕ ಭೋಗಲಾಲಸೆ ತೊರೆದು ಅಲೌಕಿಕದ ಬೆಳಕಿನತ್ತ ಸಾಗುತ್ತಾನೆ. ಅಂತರಾತ್ಮನಾದ ಆ ಗುರು ತೋರಿಸಿದ ಪಥದಲ್ಲಿಯೇ ಸಾಗುವುದಾಗಿ ಹೇಳಿ;

ನಾನು ಮುಂದು ಮುಂದಕ್ಕೆ ಬರುತ್ತೇನೆ, ಹಿಂದೆ ಸರಿಯುವುದಿಲ್ಲ. ತನ್ನನ್ನು ಮುನ್ನಡೆಸಿ ಎಂದು ಭಿನ್ನವಿಸಿದ್ದಾನೆ.

ಅಂದೆ "ಅಯ್ಯಾ, ತಂದೆ! ಏನುತೋರಿಸಿದಿಂದು?
ನಿಂದಲ್ಲಿ ನಿಲ್ಲಿನ್ನು, ಬಂದೆ ಬಂದೆ
ಚೆಂದವೇ ತಂದೆಯೇ! ಹಿಂದೆಸರಿಯುವರೇನು?
ಬಂದ ಬಂದತಾನು ಮುಂದೆ ಮುಂದೆ."

ಹಾಗೆ ಅಲೌಕಿಕದತ್ತ ಮುಖಮಾಡಿದವನ ಚಿತ್ತ ಕೆಂಡವಾಗಿದೆ. ತನ್ನ ದೇಹದ ಚಿಕ್ಕ ಮೇರೆಯನ್ನು ಮೀರಿ; ಎಲ್ಲ ಮಿತಿಗಳನ್ನು ದಾಟಿ ಆತ್ಮ ಸಾಕ್ಷಾತ್ಕಾರದ ಬೆಳಕಿನತ್ತ ಸಾಗಿದ್ದಾನೆ. ಆ 'ಬತ್ತಿ ಗೊತ್ತಿರದಂಥ ಸೆಲೆಯನ್ನು ಬಲ್‌ಬಯಸಿ' ಜ್ಞಾನದ ಜ್ಯೋತಿಯನ್ನು ಸೇರಲು ತಾನೇ ಕೆಂಡವಾಗಿ ಅನುಭಾವದತ್ತ ಸಾಗಿದ್ದಾನೆ.

ಜ್ಞಾನ ಜ್ಯೋತಿಯಾದ ಬೆಳಕಿನ ಚಿಕ್ಕೆಗೆ ಆಕರ್ಷಿತವಾದ ಚಿತ್ತ ಮೈಯನ್ನೇ ಉರಿನಾಲಿಗೆಯಾಗಿಸಿ ಊರ್ಧ್ವಮುಖಿಯಾಗಿ ಆ ಬೆಳಕನ್ನು ಅಪ್ಪಲು ಸಾಗುತ್ತಿದೆ. ಅದನ್ನು ಕವಿ 'ನೈಯನೆಕ್ಕಲು ಬಂದ ಕುಡಿಬೆಂಕಿಯಂತೆ' ಎಂಬ ಉಪಮಾನದಿಂದ ಚಿತ್ರಿಸಿದ್ದಾರೆ. ಹಾಗೆ ಮೈ ಹೊತ್ತಿ ಉರಿದು, ಮನಸ್ಸು ಮೇಲ್ಮುಖವಾಗಿ ಏರುವಾಗ – ಲೌಕಿಕದ ಸುಖ, ಭೋಗ, ಲಾಲಸೆಯ ಒಯ್ಯಾರವನ್ನು ತೊರೆದು ಸಾಗುತ್ತಿದೆ. ಅಲೌಕಿಕಕ್ಕೆ ಒಲಿದು ಅಂಗಲಾಚಿ ಪ್ರಾರ್ಥಿಸಿ – ಈ ನೆಲದಿಂದ ಅಂತರಾತ್ಮನ ಕಡೆಗೆ ಜೀವ ಸಾಗುತ್ತಿದೆ.

ಒಬ್ಬ ಸಾಧಕ ಜೀವಿ ಐಹಿಕ ಭೋಗಲಾಲಸೆ ತೊರೆದು ಅಂತರಾತ್ಮನ ಕರೆಗೆ ಓಗೊಟ್ಟು ಅಲೌಕಿಕದತ್ತ ಸಾಗಿದ ಕವನ ಇದಾಗಿದೆ.

## II ಏಳುಕನ್ನಿಕೆಯರು

ಬೇಂದ್ರೆಯವರಿಗೆ ೧೯೨೪ರ ಕನಸಿನಲ್ಲಿ ಬಂದ 'ಏಳುಕನ್ನಿಕೆಯರು' ೧೯೩೩ರಲ್ಲಿ ಕವನರೂಪ ತಾಳಿದ್ದಾರೆ. ಹಾಗಾಗಿ ಈ ಕವನದಲ್ಲಿ ವಿಸ್ತಾರವಾದ ಕನಸಿನ ವರ್ಣನೆ ಒಂಬತ್ತು ನುಡಿಗಳಲ್ಲಿದ್ದು; ವಾಸ್ತವದ ಆಲೋಚನೆ ಕೊನೆಯ ಎರಡು ನುಡಿಗಳಲ್ಲಿವೆ. ಕವನದ ಭಾವ ಸಂದರ್ಭ ಹೀಗಿದೆ: "ಒಂದು ಕನಸಿನ ಸ್ಮರಣೆ. ದಿಗಂಬರನಾಗಿ ಪರೀಕ್ಷೆ ಕೊಡುವ ಕಾಲ ಎಲ್ಲ ಜೀವಿಗಳಿಗೂ ಬರುವದು. ಆಗ ದೇವ ಕನ್ನಿಕೆಯರ ಸ್ಪರ್ಶಕ್ಕೆ ಅಧೋಗತಿಯ ಲಹರಿಗಳಿಗಿಳಿದರೆ ಆ ಪರೀಕ್ಷೆಯನ್ನು ಮತ್ತೊಮ್ಮೆ ಕೊಡಬೇಕಾಗುವುದು. ಆದರೆ ಆ ಪರೀಕ್ಷೆ ಜೀವವನ್ನು ಏಳು ಎಂದು ಎಬ್ಬಿಸಲಿಕ್ಕೆ; ಕೆಡಹಲಿಕ್ಕೆ ಅಲ್ಲ.'

ಈ ಕವನವು ನಿದ್ದೆ ಎಚ್ಚರ, ಲೌಕಿಕ ಅಲೌಕಿಕ, ನೈತಿಕ ಅನೈತಿಕ ಏಳುಬೀಳುಗಳ ದ್ವಂದ್ವಗಳಿಂದ ಕೂಡಿದೆ. ಆ ದ್ವಂದ್ವ ಸಂಘರ್ಷ ಮನೋಭಾವಗಳ ತಾಕಲಾಟದಲ್ಲಿ ತಾತ್ವಿಕ ಚಿಂತನೆ ಅಡಗಿದೆ. ಕವಿಯು ನಿದ್ದೆಗಡಲಿನಲ್ಲಿರುವಾಗ ಏಳುಕನ್ನಿಕೆಯರು ಬಂದು 'ಏಳು' ಎಂದು ಎಬ್ಬಿಸುವರು. ಆಗ ಕವಿಯು ಆ ದೇವತೆಗಳ ದಿವ್ಯಸನ್ನಿಧಿ ತನಗೆ ದೊರಕಿತೆಂದು ಏಳುತ್ತಾನೆ. ಆ ದೇವತೆಗಳು ದೀಪಮಾಲೆ ಕಂಬದಂತೆ ಸುತ್ತುವರಿದಿದ್ದಾರೆ. ಆ ತೇಜ ಅಡೆತಡೆ ಇಲ್ಲದೆ ಹರಿಯುತ್ತಿರಲು ಅದನ್ನೇ ಒರಗಿ ಆ ಬೆಳಕಿನ ಕುಡಿ ಕುಡಿಯಲು ತಾನು ಗೊಮ್ಮಟನಂತೆ ನಿಲ್ಲುತ್ತಾನೆ. ಗೊಮ್ಮಟ ಪ್ರತಿಮೆಯು ಜಿತೇಂದ್ರಯತ್ವದ, ವೀರ, ತ್ಯಾಗ, ಊರ್ಧ್ವಗಾಮಿತ್ವದ ಆಧ್ಯಾತ್ಮ ಸಂಕೇತವಾಗಿದೆ.

'ನಿಂತೆ ನಡುವೆ ಗೊಮ್ಮಟನೊಲು
ನಿಂತರವರು ಒರಗಿಸುತ್ತು
ದೀಪಮಾಲೆ ಕಂಬದಲ್ಲಿ
ದೀಪದ ಕುಡಿ ಕುಡಿಯೊಲೋ–ದೀಪದ ಕುಡಿ ಕುಡಿಯೊಲು'

ಅವನು ಹಾಗೆನಿಂತಾಗ ಆ ಏಳುಕನ್ನಿಕೆಯರು ಅವನನ್ನು ಆಮೂಲಾಗ್ರವಾಗಿ ಸ್ಪರ್ಶಿಸುತ್ತಾರೆ. ಅವರು ದೀಪವಾದುದರಿಂದ ಅವನು ಅವರ ಬೆಳಕು ಮತ್ತು ಕಾವಿಗೆ ಒಳಗಾಗುತ್ತಾನೆ. ಏಳುಕನ್ನಿಕೆಯರ ದೀಪದ ಬೆಳಕು 'ಅಡಿಮುಡಿಗಳ ತುಟಿಕಟಿಗಳ । ಮಿಡಿದು ಹಿಡಿದು ನೋಡುತಿರಲು' ಅವನ ಏರುಮನಸ್ಸು ದೇಹದ ಕಾವಿನ ಚಂಚಲತೆಗೆ ಒಳಗಾಗುತ್ತದೆ. 'ಮರ್ಮ ಕೆಣಕಿ ನೋಡಿದಂತೆ । ಕರ್ಮಕುದಿಗೆ ಬಂದಿತೋ ಕರ್ಮಕುದಿಗೆ ಬಂದಿತು.' ಮೃಣ್ಮಯ ದೇಹ ಆ ಕಾವಿನ ಕೆಣಕಿಗೆ ಕುದಿದು ಲೌಕಿಕ ಬಯಕೆಗೆ ಬೆಳಕಿನಲ್ಲಿ ತಮ್ಮ ತಮ್ಮ ಏರು ಇಳುವಿನ ತೂಗುಯ್ಯಾಲೆಯಲ್ಲಿ ಅನಾವರಣಗೊಂಡಿದೆ. ಲೌಕಿಕ–ಅಲೌಕಿಕದ ತಾಕಲಾಟದಲ್ಲಿ ಏರು ಮುಖದ ದೀಪದ ಕುಡಿಯ ರೀತಿ ಅಲೌಕಿಕಕ್ಕೆ ಕಾತರಿಸುವ ಮನ ಒಂದು ಕಡೆಯಾದರೆ; ಕುಡಿಯಲ್ಲಿ ಕುದಿದ ದೇಹವಿನ್ನೊಂದು ಕಡೆ ಲೌಕಿಕದತ್ತ ಸೆಳೆಯಲ್ಪಡುತ್ತದೆ.

ಮನಸ್ಸು ಮತ್ತು ಶರೀರದ ಆರೋಹಣ–ಅವರೋಹಣ ಎಳೆದಾಟದ ಆ ದ್ವಂದ್ವದಲ್ಲಿ ಕವಿ ತನ್ನ ಅಳವಿಗೆ ಸಿಗುವ ತನ್ನ ನಂಬಿಕೆಯ 'ಕಲ್ಲು, ಗೊಂಬೆ, ಕೂಸುಗಳನು । ಎಲ್ಲ ನಂಬಿ, ನೆನೆದುಕೊಂಡೆ' ಎಂದು ಅಲುಬುತ್ತಾನೆ. ಅವನು ತನ್ನ ಆಧ್ಯಾತ್ಮದ ಊರ್ಧ್ವಗಾಮಿ ಚಿಂತನೆ ಭದ್ರಬುನಾದಿ ಇಲ್ಲದೆ ಚಂಚಲತೆಯಿಂದ ಕರಗಿತು ಎಂಬುದನ್ನು 'ತಳವುಕಾದ ಬೆಣ್ಣೆಯಂತೆ । ಒಳಗೆ ಪ್ರಾಣ ಕರಗಿತೊ–ಒಳಗೆ ಪ್ರಾಣಕರಗಿತು' ಎಂದು ಚಿತ್ರಿಸಿದ್ದಾನೆ.

ಹೊರಗಿನ ಸ್ಥಾವರ ದೇವರನ್ನು ನಂಬಿ, ನಂಬಲಾಗದೆ ಸೋತರೂ, ಅದನ್ನು ತೋರಗೊಡದೆ ಸಾಧಕನೆಲೆಗೆ ಏರಲು ಪ್ರಯತ್ನಿಸುತ್ತಾನೆ. ಮರಳಿಯತ್ನವ ಮಾಡಿ ಜಿತೇಂದ್ರಿಯತ್ವವನ್ನು ಕಾಯ್ದುಕೊಳ್ಳಲು ತಪಕೆ ನಿಲ್ಲುತ್ತಾನೆ.

'ನಡುಕ ಮಿಡುಕು ತೋರಗೊಡದೆ
ಅಡಕದಿಂದ ನಿಂತೆ ತಪಕೆ;
ಗೆದ್ದೆನೇನೊ ಎನ್ನುವಂತೆ
ಇದ್ದೆನೊಮ್ಮೆ ಮನದೊಳೋ –ಇದ್ದೆನೊಮ್ಮೆ ಮನದೊಳು.'

ಸಾಧನಾ ನಿಯಮದಿಂದ ಮನಸ್ಸನ್ನು ವಶದಲ್ಲಿಟ್ಟುಕೊಂಡು ಆ ಏಳುಕನ್ನಿಕೆಯರ ಬೆಳಕಿನಲ್ಲಿ ಅವರ ಆಕಾಂಕ್ಷೆಯಂತೆ ಎದ್ದು ಏರು ಮುಖಿಯಾಗುತ್ತಾನೆ. ತನ್ನ ತಾಪವನ್ನು ಗೆಲ್ಲುವ ತಪಸ್ವಿಯಂತೆ ನಿಲ್ಲುತ್ತಾನೆ. ಗೆದ್ದೆ ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಾನೆ. ಸಾಧಕನಾದ ಕವಿ ಇಲ್ಲಿ ಆಧ್ಯಾತ್ಮದ ಏಳು ನಾಲಗೆಯ ಬೆಂಕಿಯ ಬೆಳಕಿನಲ್ಲಿ ದೀಪದ ಕುಡಿ ಕುಡಿಯಲು ಪ್ರಯತ್ನಿಸಿ ಆ ಝಳಕ್ಕೆ ತಡೆದುಕೊಳ್ಳದೆ ಒಮ್ಮೆ ಕರಗಿ ಹೋಗಿದ್ದಾನೆ. ಮತ್ತೆ ಅದನ್ನು ಸಾಧಿಸಲು ತನ್ನ ಚಿತ್ತವನ್ನು ಊರ್ಧ್ವಮುಖಿಯಾಗಿಸುತ್ತಾ ಸಾಗಿದ್ದಾನೆ. ಜಿತೇಂದ್ರಿಯನಾಗುವುದೆಂದರೆ ಇಂದ್ರಿಯಗಳ ಗುಲಾಮನಾಗದೆ, ಅವುಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವ ಸಾಮರ್ಥ್ಯ. ಆ ಸಾಧನಾಮಾರ್ಗ ಎಂಬುದು ಎಲ್ಲ ಲೌಕಿಕವಾದ, ಸಾಂಸಾರಿಕ, ಭೌತಿಕ ಆಸೆ ಆಕಾಂಕ್ಷೆಗಳ ತೇವಾಂಶಗಳನ್ನು ಇಲ್ಲವಾಗಿಸಿಕೊಂಡ ಗರಿಗರಿಯಾದ ಹಂಸಮಾರ್ಗ. ಆ ನೆಲೆಯಲ್ಲಿ ಸಾಧಕ ತನಗೆ ಅಂಟಿದ ದ್ರವರೂಪಿ ಮನಃ ಕಷಾಯದಿಂದ ಮುಕ್ತನಾಗಲು 'ಬೊಟ್ಟು ನೀರು ಬಿಡದ ಹಾಗೆ । ಬಟ್ಟೆಯಂತೆ ಹಿಂಡುತಿರಲು', ಏಳುಕನ್ನಿಕೆಯರಲ್ಲಿ ಒಬ್ಬಳು ಅವನ ಏರು ಮನಸ್ಸನ್ನು ತೀವ್ರಪರೀಕ್ಷೆಗೆ ಒಳಪಡಿಸುತ್ತಾಳೆ.

ತೊಡೆಯ ಮೀಂಟಿ ಬಿಟ್ಟಳಾಗ
ಕಡೆಗೆ ಅವರೊಳೊಬ್ಬಳೋ–ಕಡೆಗೆ ಅವರೊಳೊಬ್ಬಳು.

ಆ ಕ್ಷಣವೆ ಜಂಗಮ ನೆಲೆಯಲ್ಲಿ ಸಾಧನಾ ಮಾರ್ಗಕ್ಕೆ ಮೇಲ್ಮುಖವಾದ ಮನಸ್ಸನ್ನು ಹೊತ್ತ ಸ್ಥಾವರರೂಪಿ ಮೃಣ್ಮಯ ಶರೀರ ತನ್ನ ನೆಲದ ಗುಣದಿಂದ ಅಲುಗಾಡಿ ಹೋಗುತ್ತದೆ. ಲೈಂಗಿಕ ಆಸೆಗೆ ಒಳಗಾಗುತ್ತದೆ. ಆಗಿನ ಭಾವವನ್ನು 'ಮೈಯೆಬಾಯಿ ಬಿಟ್ಟ ಹಾಗೆ । ಬೆವರು ಬಂದು ಮೈಯ ತುಂಬ' ಎಂಬ ಪ್ರತಿಮೆಗಳಲ್ಲಿ – ಅವನು ನೆಲದಸ್ತರಕ್ಕೆ ಇಳಿದು ಹೋದುದನ್ನು ಚಿತ್ರಿಸಿದ್ದಾರೆ.

'ಅಯ್ಯೊ ಎಂದು ತಿಳಿಯದಾಗಿ
ಮೈಯೆ ಬಾಯಿ ಬಿಟ್ಟಹಾಗೆ
ಬೆವರು ಬಂದ ಮೈಯ ತುಂಬ
ನವಿರುಮುಳ್ಳು ನಿಂತಿತೋ–ನವಿರು ಮುಳ್ಳು ನಿಂತಿತು.

ಆ ನವಿರುಮುಳ್ಳು ದೇಹದ್ದೆಂದರೂ ಅದು ಊರ್ಧ್ವಮುಖವಾಗಿ ಸಾಗದ ಮನಸ್ಥಿತಿಯ ಸೋಲು. ದೇಹ ಮತ್ತು ಮನಸ್ಸು ಒಟ್ಟುಗೂಡಿ ಸಾಧನಾ ಪಥಕ್ಕೆ ಸಿದ್ಧವಾಗದ ಕಾರಣ ತನ್ನ ಅಂತಸ್ಥ ದೌರ್ಬಲ್ಯಕ್ಕೆ ಮರುಗಿದ್ದಾನೆ. ಅದನ್ನು ಕವಿಯು ಸಮರ್ಥ ಪ್ರತಿಮೆಗಳಲ್ಲಿ ಹೀಗೆ ಕಾವ್ಯಾನುಭವವಾಗಿಸಿದ್ದಾರೆ.

'ಸ್ವರಕೆ ಸ್ವರವು ಕೂಡಿಕೊಂಡು
ಹರಕೆ ಬರುತಲಿತ್ತು ಹಾಡಿ
ಡೊಳ್ಳು ಬಿದ್ದ ತಂತಿಯಿಂದ
ಜೊಳ್ಳುನಾದವೆದ್ದಿತೋ – ಜೊಳ್ಳುನಾದವೆದ್ದಿತು.

ಬೆಳಕಿನ ಕುಡಿ ಆರುವಂತೆ
ಚಳಕದ ಕನ್ಯೆಯರು ಹಾರೆ,
ಹೇಡಿಮಣ್ಣ ಕಂಬದಂತೆ
ಗಾಡಿಯಳಿದು ಬಿದ್ದೆನೋ–ಗಾಡಿಯಳಿದು ಬಿದ್ದೆನು.

ಸ್ವರಕ್ಕೆ ಸ್ವರ ಸೇರಿದಂತೆ ಆರೋಹಣ ನೆಲೆಯಲ್ಲಿ ಬಂದು ಸಂಕಲ್ಪಶಕ್ತಿಗೆ ಸಾಗಬೇಕಾದ ಚಿತ್ತ ಅಧಃ ಪತನಗೊಂಡು ಡೊಳ್ಳುನಾದ ಹೊರಡಿಸಿತು. ಗೊಮ್ಮಟನಂತೆ ಅಚಂಚಲತ್ವಕ್ಕೆ ಸ್ಥಿತ ಪ್ರಜ್ಞನಾಗಿ ಏರುಮುಖ ವಾಗಬೇಕಾದ ಶರೀರ ಹೇಡಿಮಣ್ಣಕಂಬದಂಥೆ ಕುಸಿದುಹೋಯಿತು. ವೇಗ ಚಾತುರ್ಯದ ಬೆಳಕಿನ ಕುಡಿಯಾದ ಏಳುಕನ್ನಿಕೆಯರು ಹಾರಿ ಹೋಗಲು ಅಧ್ಯಾತ್ಮದ ಸೊಬಗು ಕಳಚಿಹೋಯಿತು.

ಇದು ಅಧ್ಯಾತ್ಮ ಸಾಧಕನ ಪ್ರಾರಂಭದಸೋಲಿನ ಸಾಂಕೇತಿಕ ಕವನವಾಗಿದೆ. ಅವನ ಸೋಲುಗಳನ್ನು ಬೇಂದ್ರೆಯವರು ವಿರುದ್ಧ ಪ್ರತಿಮೆಗಳಲ್ಲಿ ಸಮರ್ಥವಾಗಿ ಹಿಡಿದಿಟ್ಟಿದ್ದಾರೆ. ಆತ್ಮ ಪರೀಕ್ಷೆಗೆ ಒಳಗಾಗಿ ಅದರಲ್ಲಿ ಯಶಸ್ವಿಯಾದ ನಂತರ ಆತ್ಮಶೋಧನೆಗೆ ಒಳಗಾಗಬೇಕಾದುದು ತತ್ವದರ್ಶನದ ಮೊದಲಮೆಟ್ಟಲು. ಆ ಶೋಧ ಇಲ್ಲಿ ಕಾವ್ಯಾನುಭವವಾಗಿದೆ.

ಇನ್ನು ಉಳಿದ ಎರಡುನುಡಿಗಳು ಸಾಧನಾ ಮಾರ್ಗದ ಕವಿ ಎಚ್ಚತ್ತು ಹಗಲ ಬೆಳಕಿನಲ್ಲಿ ತನ್ನ ಆತ್ಮಸ್ಥೈರ್ಯ ಕುಸಿದ ಕಾರಣದ ವಿಶ್ಲೇಷಣೆಗೆ ತೊಡಗಿದ್ದಾನೆ. ಅವನು ಆ ಸಾಧನಾ ಪಥದ ಪರೀಕ್ಷೆಗೆ ಒಳಗಾದ ಅನುಭವವೇ ಅವನಿಗೆ ಅನನ್ಯವಾಗಿದೆ. ಏಳುಕನ್ನಿಕೆಯರು 'ಬೀಳು' ಎಂದು ಹೇಳಲಿಲ್ಲ. ಆದರೆ ತಾನು ಆ ಸಿದ್ಧ ಮಾರ್ಗಕ್ಕೆ ಆಗಿನ್ನೂ ಅಣಿಯಾಗಿರಲಿಲ್ಲ ಎಂಬ ಸತ್ಯವನ್ನು ತಿಳಿದಿದ್ದಾನೆ. ಆ ಅನುಭವವೇ ಒಂದು ಆನಂದಲಹರಿ.

ಆ ರಸಾನಂದದ ನೆಲೆಗೆ ಏರದಿರಲು ತನ್ನೊಳಗಿನ ವಿರಸಭಾವವೇ ಕಾರಣ. ದೇಹ ಮನಸ್ಸು ಎರಡನ್ನೂ ಹದಗೊಳಿಸುವ ಅನುಭವ ಆಗ ಆಗಿರಲಿಲ್ಲ. ಅದನ್ನು ಹೊಂದಲು ಹೊಸ ಸಮರಸ ಕೂಡಿದಾಗ ಮತ್ತೆ ಪರೀಕ್ಷೆಗೆ ಒಳಗಾಗಿ ವಿಜಯಿಯಾಗುವೆ ಎಂದು ಆತ್ಮಾಭಿಮಾನದಿಂದ ನುಡಿದಿದ್ದಾನೆ. ಅದೇ ಸಾಧಕನಿಗೆ ಇರಬೇಕಾದ ಎಚ್ಚರ.

'ರಸವು ವಿರಸವಾಯಿತಂದು
ಹೊಸ ಸಮರಸ ಕೂಡಿದಾಗ
ಏಳುಕನ್ನಿಕೆಯರೆ, ಬಂದು
ಆಳ ಮುಳುಗಿ ನೋಡಿರೇ–ಆಳಮುಳುಗಿ ನೋಡಿರಿ.'

## III ನಾಯಕ

ನಾಯಕ (ರಚನೆ : ೧೯೨೬) ಕವನವು ಆಧ್ಯಾತ್ಮಿಕ ಜಿಜ್ಞಾಸೆಯ ಕವನವಾಗಿದೆ. ಪರಮಾತ್ಮ ಇಲ್ಲಿ ಒಡೆಯನಾಗಿ, ಜೀವಿ ನಾಯಿಯಾಗಿದೆ. ಅದಕ್ಕೆ ಮಂದಿ ಮಂದಿಯಲ್ಲಿ ನೆರೆಹೊರೆಯವರಲ್ಲಿ ತಪ್ಪಿಸಿಕೊಂಡಿರುವ ತನ್ನ ಒಡೆಯನನ್ನು ಮೂಸಿಟ್ಟು ಗುರುತಿಸುವ ಲಕ್ಷಣವಿದೆ. ಅವನು ತನ್ನನ್ನು 'ಕುರೋ ಕುರೋ' ಎಂದು ಕರೆಯುವನೇ ಎಂದು ಕಿವಿಗೊಟ್ಟು ಆಲಿಸುತ್ತಿದೆ. ಆದರೆ ಅದರ ಚಿತ್ತ ಚಂಚಲವಾಗಿದೆ, ಹಮ್ಮಿನದಾಗಿದೆ.

ಆ ಒಡೆಯನನ್ನು ಹುಡುಕಿಕೊಂಡು ಸಾಗಬೇಕೆಂಬ ಮನಸ್ಸಿದ್ದರೂ ಎಂಜಲದ ಆಶೆಯಿಂದ ಹಿಂಜರಿದಿದೆ. ಆಸೆಗಳಿಂದ ತುಂಬಿದಕಾರಣ :

'ಪಂಜರದವೋಲಾಯ್ತು ಬಯಕೆಗಳ ಬಯಲ ಬಲೆ;
ಸಂಜೆ ಮುಸುಕಿತ್ತು ಅರೆವೀದಿಯಲ್ಲಿ'

ಆಗ ಕೊರಳಪಟ್ಟಿ ಇದ್ದ ಲೈಸನ್ಸ್ ನಾಯಿಯಾದರೂ ಕರೆಯುವರ ಕಾಣದೆ ಪರದೇಶಿಯಾಗುತ್ತದೆ. ಮಧ್ಯವಯಸ್ಸು ದಾಟಿ ಮುದಿಯಾಗಿ 'ಕತ್ತಲೆಯ ನಿಟ್ಟಿರುಳು' ಆವರಿಸಿದಾಗ ಜೀವಿ ಒರಲುತ್ತದೆ "ನನ್ನನಾಯಕ, ನೀನು ಎಲ್ಲಿ ಇರುವೆ?"

## IV ಶುಭನುಡಿಯೆ ಶಕುನದ ಹಕ್ಕಿ

ಬೇಂದ್ರೆಯವರು ಜೀವನದ ಸಂಗ್ರಾಮದಲ್ಲಿ ಕಷ್ಟಗಳು ಆವರಿಸಿದ ಕಾಲವನ್ನು ಮುಸ್ಸಂಜೆ ಎಂದಿದ್ದಾರೆ. 'ಶುಭನುಡಿಯೆ ಶಕುನದ ಹಕ್ಕಿ' (ರಚನೆ ೧೯೩೦–೩೧) ಕವನದಲ್ಲಿ ಮನುಷ್ಯನಿಗೆ ತೊಂದರೆ, ಆತಂಕಗಳು ಉಂಟಾದಾಗ ಪ್ರಕೃತಿ ಸಹಜಕ್ರಿಯೆಯೂ ಕೆಡುಕಿನ ಸೂಚನೆಯಾಗಿದೆ. ವಾತಾವರಣವೇ ತನ್ನ ವಿರುದ್ಧವಿದೆ ಎಂಬ ಭಾವಕ್ಕೆ

ಒಳಗಾಗಿದೆ. ಆ ಪರಿಸರದ ಪಕ್ಷಿಗಳ ಅತಿಸಹಜ ಕೂಗು ನಂಬಿಕೆಯ ಅಶುಭಸೂಚಕವಾಗಿ ಕಾಡಿದೆ. ಅದನ್ನು ಎದುರಿಸಿ 'ಶುಭನುಡಿಯೆ ಶಕುನದ ಹಕ್ಕಿ' ಎಂದು ಆಶಿಸುತ್ತಿದ್ದಾಗ ಶುಭವಾಗಿದೆ. ಕಾಳರಾತ್ರಿಕಳೆದಿದೆ. ಅಜ್ಞಾನದ ಅಶುಭಭಾವ ದೂರವಾಗಿ ಜ್ಞಾನದ ಬೆಳಕು ಮೂಡಿದೆ.

ಬೇಂದ್ರೆಯವರು ಈ ಕವನವನ್ನು ಸಾವೇರಿರಾಗದ ಏಕತಾಳದಲ್ಲಿ ಹಾಡಾಗಿ ರಚಿಸಿದ್ದಾರೆ. ಹಾಡು ಮನದ ಒಳಲಯದ ವ್ಯಕ್ತ ಭಾವವಾದುದರಿಂದ ಅದು ಸಹೃದಯರ ಕಿವಿಗೆ ಇಂಪಾಗಿದೆ. ಮನಕ್ಕೆ ಮುದನೀಡಿದೆ.

'ಶುಭ ನುಡಿಯೆ
ಶುಭ ನುಡಿಯೆ ಶಕುನದ ಹಕ್ಕಿ ।
ಶುಭ ನುಡಿಯೆ ॥

ಎಂಬ ಪಲ್ಲವಿಯ ಈ ಹಾಡು ಶುಭದ ಹಕ್ಕಿಯನ್ನು, ಶುಭದ ಹಾಡು ಹಾಡಲು ಒತ್ತಾಯಿಸಿದ ದನಿಹೊಂದಿದೆ. ಜೀವಿಯ ಕಷ್ಟ, ನೋವು, ದುಃಖವು ಕತ್ತಲಿದ್ದಂತೆ. ಅದನ್ನು ಕವಿಯು ಕತ್ತಲಾವರಿಸಿದಾಗ ಗಾಬರಿಯಾಗಿ ಅಳುವ ಕೂಸಿನ ರೂಪಕದಲ್ಲಿ ಚಿತ್ರಿಸಿದ್ದಾರೆ.

'ಮುಂಗಾಳು ಕವಿಯುವಾಗ
ಹಸುಗೂಸಿಗೆ ಕಸಿವಿಸಿಯಾಗಿ
ಕಕ್ಕಾವಿಕ್ಕಿಬಡುತ ಪಾಪ
ಕಿರಿಕಿರಿ ಅಳುತಲಿತ್ತ
ಶುಭ ನುಡಿಯೆ
ಶುಭ ನುಡಿಯೆ ಶಕುನದ ಹಕ್ಕಿ । ಶುಭ ನುಡಿಯೆ'

ಎರಡನೆಯ ನುಡಿಯಲ್ಲಿ ಭಯಕ್ಕೆ ಒಳಗಾದ ಜೀವಿ. ಆ ಕಷ್ಟದ ವಾತಾವರಣಕ್ಕೆ ಪ್ರಾಣವೇ ಹಾರಿಹೋದಂತಾಗಿದ್ದಾನೆ. ಅದು ಉಪಮಾಲಂಕಾರದಲ್ಲಿ 'ಇರುಳು ಗಾಳಿ ಬೀಸುವಾಗ । ಹಣತಿಸೊಡರು ಹೆದರಿದಂತೆ ।' ಹೆದರಿಕೆಯನ್ನು ಅನುಭವವಾಗಿಸಿದೆ. ಆ ಭಯ ಸಣ್ಣ ನಡುಕ ಹುಟ್ಟಿಸಿ ಜೀವತಣ್ಣಗಾದ ಹಾಗಿದೆ. ಚಳಿಗೆ ಒಳಗಾದ ಆ ನೋವಿನ ಜೀವಿ ಆಯಾಸದಿಂದ ನಿದ್ರೆಗೆ ಒಳಗಾದುದನ್ನು ಬೇಂದ್ರೆಯವರು ಬಣ್ಣಿಸಿರುವ ರೀತಿ ಅನನ್ಯವಾಗಿದೆ. ಆದರೆ ಆ ನಿದ್ರೆಯಲ್ಲಿಯೂ ಅವನ ಒಳಮನಸ್ಸು ಅಶುಭ ಸೂಚನೆಯನ್ನು ತನ್ನಿಂದಲೇ ಹೊರ ದೂಡಿಸಿಕೊಂಡು ಗಾಬರಿಯಾಗಿದೆ.

'ನಿದ್ದೆ ಬಳಲಿ ಬಳಿಯಲಿ ಬಂದು
ಕೂಡಿದೆವೆಗಳಾಸರೆಯಲ್ಲಿ
ಮೆಲ್ಲಗೆ, ಒರಗುವ ಅದನು
ಒಂಟಿ ಸೀನು ಹಾರಿಸುತಿತ್ತ.'

ನೊಂದ ಜೀವಿ ತೊಳಲಾಟದಲ್ಲಿಯೂ, ನಿರಾಶೆಯ ಕತ್ತಲತಳದಲ್ಲಿ ಕೆಲವು ಆಶೆಯ ಚಿಕ್ಕೆಗಳಿವೆ ಎಂದು ಅದರ ಹೊಳಪಿಗೆ ಹರ್ಷಿಸುತ್ತಾನೆ.ಅಷ್ಟರಲ್ಲಿ ಉಲ್ಕಾಪಾತವಾಗಿ ಆ ಹೊಳಪು ಸಿಡಿದು ಮತ್ತೆ ಕತ್ತಲಾವರಿಸಿದುದನ್ನು ನಾಲ್ಕನೆಯ ನುಡಿ ಚಿತ್ರಿಸಿದೆ.

ಕಾಣಬಹುದಾದ ಆಶಾಕಿರಣ ಒಡೆದು ಚೂರಾದಾಗ ದಣಿದ ಜೀವ ಮೈಯಮರೆತು ನಿದ್ರಿಸಿದೆ. ಆದರೆ ಒಳಗಿನ ಮನದಲ್ಲಿ ಎಸರಿಗಿಟ್ಟ (ಹಿಟ್ಟುಮಾಡಲು ಕುದಿಯಲಿಡುವ ನೀರಿಗೆ 'ಹಿಟ್ಟಿಗೆ ಎಸರಿಡು' ಎನ್ನುವರು. ಅದು ಕಾದು, ಕುದ್ದು ಶಬ್ದಮಾಡುತ್ತದೆ. ಆಗ ಹಸೀಟು ಹಾಕಿ ಮತ್ತೆ ಕುದಿಸಿ, ತೊಳಸುವರು) ಚಿಂತೆ ಕುದಿ ಕುದಿದು ಕನವರಿಸುತ್ತದೆ. ಬೇಂದ್ರೆಯವರು ಜನಪದ ಬದುಕನ್ನು ಶಿಷ್ಟಕಾವ್ಯದ ರೂಪಕವಾಗಿ ಬಳಸಿರುವ ಹಲವು ಚಿತ್ರಗಳಲ್ಲಿ ಇದು ಅನನ್ಯವಾಗಿದೆ.

'ಉಸಿರ ತೂಗು-ತೊಟ್ಟಿಲಲ್ಲಿ
ಜೀವ ಮೈಯ ಮರೆತಿರಲಾಗಿ
ಒಳಗಿನಾವ ಚಿಂತೆಯ ಎಸರೋ
ತಂತಾನೆ ಕನವರಿಸುತಿತ್ತ.'

ನಟ್ಟಿರುಳಿನಲ್ಲಿ ನಿದ್ದೆ ಆ ಜೀವಿಯನ್ನು ಆವರಿಸಿದೆ. ನೊಂದಜೀವಿ ಮಲಗಿದ್ದಾನೆ. ಸವಿಗನಸು ಕಾಣುತ್ತಿದ್ದಾನೆ ಎನ್ನುವಷ್ಟರಲ್ಲಿ ಗೂಗೆಯೊಂದು ಘೂಕ್ಕೆಂದು ಸವಿಗನಸಿಗೆ ಅಪಶಕುನ ಹಾಡಿದೆ. ಆಗ ಮತ್ತೆ ಪಲ್ಲವಿ 'ಶುಭ ನುಡಿಯೆ ಶಕುನದ ಹಕ್ಕಿ' ಎಂದು ಶುಭನುಡಿಗೆ ಆಶಿಸಿದೆ.

ಎಚ್ಚರಾದ ಮೇಲೆ, ಪೆಚ್ಚಾದ ಮನಸ್ಸು ಸ್ತಿಮಿತರಹಿತವಾಗಿ ಹರಿದಾಡುತ್ತಿದೆ. ಆಕಳಿಕೆ ಆವರಿಸಿ ನಿದ್ದೆ ದೂರವಾಗಿದೆ. ಆಸ್ಥಿತಿಯಲ್ಲಿ ಹಲ್ಲಿ ಲೊಟಗುಟ್ಟಿದೆ. ಅದು ಹಲವು ಒಳಿತು ಕೆಡಕಿನ ಭಾವನೆಯನ್ನು ಬಿತ್ತಿ, ದಿಕ್ಕು ದೆಸೆಗಳನ್ನು ಯೋಚಿಸ ಹತ್ತಿದೆ. ಹೀಗೆ ಏಳು ನುಡಿಗಳವರೆಗೆ ಸಾಗಿದ ಕತ್ತಲು ಬವಣೆ ಎಂಟನೇ ನುಡಿಯಲ್ಲಿ ಬೆಳಗಿನ ತಂಗಾಳಿಯಾಗಿದೆ. ನಸುಕು ಮೂಡಿ ಹಾಲಕ್ಕಿ ಹಾಡತೊಡಗಿದೆ. ಅನಿಷ್ಟಗಳನ್ನು ದೂಡಿ ಶುಭ ಹೇಳುವ ಜನಪದ ಆಶಯ ಹಾಡಾಗಿ ಹರಿದಿದೆ. ತಾನು ಮತ್ತೆ ಮತ್ತೆ

ಹಾಡಿ ಆಶಿಸುತ್ತಿದ್ದ ಶುಭವನ್ನು ಹಾಲಕ್ಕಿ ನುಡಿದಿದೆ. ಕತ್ತಲೆ, ಆತಂಕ, ಅಜ್ಞಾನದ ಭಯದೂರವಾಗಿದೆ. ಆ ಶುಭದ ಹಕ್ಕಿಯಸೊಲ್ಲನ್ನು ನಂಬಿ ಎದ್ದು ಕವಿ ಹಾಡಿದ್ದಾನೆ.

'ನಿನ್ನ ಸೊಲ್ಲ ನಂಬಿ ಎದ್ದೆ
ಮೈಯೆಲ್ಲ ನಡುಕವಿದ್ದು
ನೀನೆ ಶುಭ ನುಡಿಯುವಾಗ
ಏನಿದ್ದೇನು? ಎಲ್ಲಾ ಶುಭವೇ!
ಶುಭ ನುಡಿಯೆ
ಶುಭ ನುಡಿಯೆ ಶಕುನದಹಕ್ಕಿ । ಶುಭ ನುಡಿಯೆ.'

## V ನಿದ್ದೆ

ಬೇಂದ್ರೆಯವರು 'ನಿದ್ದೆ' ಕವನವನ್ನು ಹಿಂಡಲಗಿ ಜೇಲಿನಲ್ಲಿ ೧೯೩೨ರಲ್ಲಿ ರಚಿಸಿದ್ದಾರೆ. ಎಚ್ಚರವಿದ್ದು ನಿದ್ದೆಯ ಸ್ಥಿತಿಯಲ್ಲಿರಬೇಕಾದದ್ದು ಜೇಲುವಾಸ. ಅಲ್ಲಿ ದೇಹಕ್ಕೆ ಸೇರೆವಾಸ ವಿಧಿಸಿದ್ದರೂ ಮನಸ್ಸಿನ ಆಯ್ಕೆಯ ಸ್ವಾತಂತ್ರ್ಯವನ್ನು ಯಾರೂ ಕಿತ್ತುಕೊಳ್ಳಲು ಆಗುವುದಿಲ್ಲ. ಆ ಸುವರ್ಣಾವಕಾಶದಲ್ಲಿ ಬೇಂದ್ರೆಯವರು ಈ ಜೀವನದ ಅರ್ಥವೇನು ಎಂಬ ಶೋಧಕ್ಕೆ ತೊಡಗಿದರು.

ನಿದ್ದೆಗೆ ಜಾರದೆ ಮನಸ್ಸನ್ನು ಜಾಗೃತವಾಗಿರಿಸಿಕೊಂಡು ಚಿಂತನಶೀಲರಾಗಿ 'ನಿದ್ದೆ' ಕಾವನ ರಚಿಸಿದರು. ಅದು ಅನಿಮಿಷತ್ವ, ಎಚ್ಚರ. ಅಲ್ಲಿ ಸಾಧಾರಣ ನಿದ್ದೆಯಲ್ಲಿ ಕಾಣುವ ಅಪ್ರಿಯ ಕನಸು, ಯಕ್ಷಿಣಿ ಹಾಗೂ ದಣಿವು ಇಲ್ಲ. ಅಂತಹ ಜಾಗೃತ ಸ್ಥಿತಿಯಲ್ಲಿ ಧ್ಯಾನಶೀಲರಾಗಿ ಮೇಲೇರಿದ್ದನ್ನು 'ನೇರಿತು', 'ನಿಚ್ಚಳ' ಪ್ರತಿಮೆಗಳಲ್ಲಿ ಬಣ್ಣಿಸಿದರು.

ಈ ಎಚ್ಚರದೀ ಹೆಚ್ಚಳ
ಈ ನೇರಿತು ಈ ನಿಚ್ಚಳ
ಮೂಡಲಿಲ್ಲಿ ಅರಸು ನಾನು,
ನಿಂತ ನೆಲೆಯೆ ಲೋಕ ತಾನು.

ಅವರಿಗುಂಟಾದ ಎಚ್ಚರ 'ನೇರಿತು' – ಋಜುವಾದುದು, ನೇರವಾದುದು. ಅದು 'ನಿಚ್ಚಳ'– ನಿರ್ಮಲವೂ ಸ್ಪಷ್ಟವೂ ಆದುದು. ಅದು ಸತ್ಯಸಾಕ್ಷಾತ್ಕಾರ. ಅದು ಆನಂದ, ಶಾಂತಿ. ಹಾಗಾಗಿ ಅವರು ಹೆಮ್ಮೆಯಿಂದ ಹೇಳಿಕೊಂಡರು. 'ಅರಸು ನಾನು. ನಿಂತ ನೆಲೆಯೆ ಲೋಕ ತಾನು.'

ಅಂತಹ ಜಾಗೃತ ಸ್ಥಿತಿಗೆ ಏರಲು ತನಗೆ ಆಸರೆಯಾಗಿ ಮಾರ್ಗದರ್ಶನ ಮಾಡಿದವರು ಆಧ್ಯಾತ್ಮಜೀವಿ ಗುರುಗಳು. ಅವರು ಕಣ್ಣರಿಕೆಯಲ್ಲಿ ಅಂದರೆ–ಸಾಕ್ಷಾತ್ ಲಕ್ಷ್ಯವಹಿಸಿ ಬೋಧಿಸಿದ್ದನ್ನು ಕೇಳಿಸಿಕೊಂಡು ತಾನು ಧ್ಯಾನಶೀಲನಾದೆ. ಸಾಧನಾ ಪಥದಲ್ಲಿ ನಡೆದೆ. ಅದು ತನ್ನ ಆಂತರ್ಯವನ್ನು ಬೆಳಗಿಸಿತು ಎಂದು ಬೇಂದ್ರೆಯವರು ರೂಪಕಾತ್ಮಕವಾಗಿ 'ಹೆಡೆ ಬೆಳಕಲಿ ಹಾದಿಕಂಡು' ಎಂದು ಚಿತ್ರಿಸಿದ್ದಾರೆ.

ಆ ಬೆಳಕಿನ ಪಥದಲ್ಲಿ ಸಾಗುವಾಗ 'ಹುಡುಕುವುದೇನಿನ್ನೆಲ್ಲಿ? ಇದೆ ಅದು ಅಂಗೈನೆಲ್ಲಿ' ಎಂದು ತನ್ನ ಆಧ್ಯಾತ್ಮದ ಅರಿವಿಗೆ ತೃಪ್ತರಾಗಿದ್ದಾರೆ.

ಅದುವರೆಗೂ ಅವರಲ್ಲಿದ್ದ ಹಳೆ ಎಚ್ಚರ, ಅರೆ ಹುಚ್ಚು ಎಂಬುದನ್ನು ಹಸುಬುದ್ಧಿಗೂ ಸ್ವಲ್ಪ ಹೆಚ್ಚಿನದಾಗಿತ್ತು ಎಂದು ಹೇಳಿಕೊಂಡಿದ್ದಾರೆ. ಎಲ್ಲಿ ಬಂಧನದ ಹಿಡಿತದಲ್ಲಿಯೂ ತಾನು ಸ್ವತಂತ್ರನಾಗಿದ್ದೆ. ತನ್ನನ್ನು ಆ ಸೆರೆವಾಸ ಏನೂ ಮಾಡಲಾಗಲಿಲ್ಲ. ತಾನು ಕಂಡ ಅನಿಮಿಷತ್ವದ 'ನಿದ್ದೆ' ಮರುಹುಟ್ಟು, ಜ್ಞಾನೋದಯದ ಮೊದಲಿದ್ದ ಕತ್ತಲನ್ನು ದಾಟಿ ಬಂದ ಅದ್ಭುತ ಅನುಭವ ಎಂದಿದ್ದಾರೆ.

ಹಳೆ ಎಚ್ಚರ ಅರೆ ಹುಚ್ಚು
ಹಸು ಬುದ್ಧಿಗು ತುಸು ಹೆಚ್ಚು
ಆ ಎಚ್ಚರ ಈ ನಿದ್ದೆ!
ಸತ್ತು ಹುಟ್ಟಿದಂತಿದ್ದೆ.

## VI ಅದುವರೆಗೂ

'ಅದುವರೆಗೂ' ಬೇಂದ್ರೆಯವರು ಸೆರೆವಾಸವಿದ್ದಾಗಿನ ವೇದನಾನುಭವದ ಕವನ. ಅದರ ಪ್ರಥಮನುಡಿಯ 'ನಿಟ್ಟುಸಿರಿನ ತಿದಿ', 'ಹೊತ್ತು ತಿರುವ ಎದೆ', 'ಕಣ್ಣೀರಿನ ಕುದಿ' ಪ್ರತಿಮೆಗಳಲ್ಲಿ ಜೀವ ಬೇಯುವುದನ್ನು ಹೇಳಿರುವ ಒತ್ತಡ, ಕಾವು, ವೇದನೆ ಸಹೃದಯನಿಗೆ ತಟ್ಟುವಂತಿದೆ.

ಅಂತಹ ದಾರುಣ ಸ್ಥಿತಿಯಲ್ಲಿ ಕಾಯುವ 'ದೈವ' ಒಂದಿದೆ ಎಂಬ ಭರವಸೆ ಈ ಕವನದ ಎರಡನೆಯ ನುಡಿಯಲ್ಲಿದೆ. ಅದು ಬೇಂದ್ರೆಯವರ ದೈವದಲ್ಲಿನ ಅಚಲ ಶ್ರದ್ಧೆಯ ಮಿಡಿತ, ತುಂಬು ಆಶಾವಾದ.

ತೊಗಲ ಮೈಯ್ಯ ಮರೆಯಲ್ಲಿ
ಒಳ ಉಸಿರಿನ ಒರೆಯಲ್ಲಿ
ನಿದ್ದೆ ನೀರ ತೆರೆಯಲ್ಲಿ
ದೇವ ಕಾಯುತಿರುವನು.

ಆ ದೈವದ ಶಕ್ತಿ ಬಂದು ಪೋಷಿಸುವ ಬಗೆಯೆಂದರೆ– ತೆರೆಮರೆಗಳನೆತ್ತರಿಸಿ, ತೊಡಕುಗಳನ್ನು ಕತ್ತರಿಸಿ, ಅವನ ಬೆಳಕ ಬಿತ್ತರಿಸಿವುದು. ದೈವದ ಶಕ್ತಿ ಗಟ್ಟಿಯಾಗಿದ್ದು ಅಪಾರವಾದುದಾಗಿದೆ. ಈ ಪ್ರಪಂಚ ಮತ್ತು ಇದರ ಜೀವಿಗಳು ಟೊಳ್ಳಾಗಿದ್ದು ಮಿತಿಗೊಳಪಟ್ಟಿದ್ದಾರೆ ಎಂಬುದನ್ನು 'ಅಲಗು', 'ಗಲಗು' ಪ್ರತಿಮೆಗಳಲ್ಲಿ ಧ್ವನಿಸಿದ್ದಾರೆ.

ಆ ಶಕ್ತಿ ಅಲಗಿನಂತೆ
ಈ ಪ್ರಪಂಚ ಗಲಗಿನಂತೆ.

ದೈವದ ಶಕ್ತಿಯೆಂಬುದು ಕತ್ತಿಯ ಹರಿತವಾದ ಅಂಚು ಅಲಗಿನಂತೆ. ಈ ಪ್ರಪಂಚ ಗಲಗು–ಲೇಖನಿಗಳನ್ನು ಮಾಡಲು ಬಳಸುವ ಟೊಳ್ಳಾಗಿರುವ ಒಂದು ಬಗೆಯ ಬೆತ್ತ– ಟೊಳ್ಳಾದುದು. ಆದಕಾರಣ ಆ ಶಕ್ತಿ ಬಂದು ಪೊರೆಯುವವರೆಗೂ ಮಲಗಿದಂತೆ ಸಹನೆಯಿಂದಿರೋಣ ಎಂದಿದ್ದಾರೆ.

ಈ ಕವನವು ಜೀವನದಲ್ಲಿ ತಾಳ್ಮೆ ಅತಿ ಅವಶ್ಯಕ ಎಂಬ ಚಿಂತನೆಯ ರೂಪಕವಾಗಿದೆ.

## VII ಇದೊ ಪಂಜರ

'ಸೆರೆಮನೆಯಲ್ಲಿ ಹೋಗಿ ಕುಳಿತಾಗಲೇ ಬಿಡುಗಡೆಯ ವಿಷಯವಾಗಿ ಸ್ಪಷ್ಟ ಕಲ್ಪನೆ ಬರುತ್ತದೆ' ಎಂಬ ಭಾವ ಸಂದರ್ಭ ಹೊಂದಿದ ಕವನ 'ಇದೊ ಪಂಜರ'. ಬೇಂದ್ರೆಯವರು ಈ ಕವನವನ್ನು ಹಿಂಡಲಗಿ ಜೇಲಿನಲ್ಲಿ ೧೯೩೨ರಲ್ಲಿ ರಚಿಸಿದರು. ಜೇಲು ಎಂಬ ಪಂಜರದೊಳಗೆ ಕುಳಿತಾಗ ಅವರ ಚಿಂತನೆಯ ಹಕ್ಕಿ ಗರಿಗೆದರಿದ ಭಾವಲಹರಿ ಇದಾಗಿದೆ.

ಬೇಂದ್ರೆಯವರು ಈ ಕವನದಲ್ಲಿ ತುಂಬಾಸರಳವಾಗಿ ಪಂಜರದ ಕಿರಿದು ಮತ್ತು ಮುಗಿಲ ವಿಸ್ತಾರ ಹೇಳುತ್ತ 'ಅಲ್ಲಿ ಇರುಳಿನಲ್ಲಿ ಬೆಳಗು, ಕತ್ತಲಿಲ್ಲಿ ಒಳಗು ಹೊರಗು' ಎಂದು ಸೆರೆವಾಸದ ಕತ್ತಲ ಚಿತ್ರಣ ನೀಡಿದ್ದಾರೆ. ಸುತ್ತಲೂ ಆವರಿಸಿದ ಗೋಡೆ ಕಂಡು ತಮ್ಮ ಅನುಭವವನ್ನೇ ಕಾವ್ಯವಾಗಿ 'ಬರುವವರೆಗೆ ಒಳಗಡೆಗೆ, ಬೆಲೆಯು ಬರದು ಬಿಡುಗಡೆಗೆ' ಎಂಬ ಸ್ವಾತಂತ್ರ್ಯದ ಮೌಲ್ಯವನ್ನು ತಿಳಿಸಿದ್ದಾರೆ.

ದುಷ್ಟ ವ್ಯವಸ್ಥೆಯಿಂದ ಜೀವನದಲ್ಲಿ ಸಂಕಷ್ಟಗಳ ಸರಮಾಲೆಗಳು ಬಂದು ಮುತ್ತಿದಾಗ– ಅದಕ್ಕೆ ಪರಿಹಾರವನ್ನು ಕಲಿಸುವ ಪಾಠಶಾಲೆಯಂತಿದೆ ಸೆರಮನೆ ಎಂಬ ಚಿಂತನೆಯನ್ನು ನೀಡಿದ್ದಾರೆ. ಜೊತೆಗೆ ಶಾಂತಿ ಮತ್ತು ಸಮಾಧಾನದ ಅರಸುವಿಕೆಯ ತಾಣವಾಗಿ ಆಂತರ್ಯದ ಜಾಗೃತಿಯ 'ಆ ತಿಳಿವಿಗೆ ಇಲ್ಲಿ ಹಗಲು' ಎಂಬ ಅದರ ಇನ್ನೊಂದು ಇತ್ಯಾತ್ಮಕ ಮುಖವನ್ನು ಈ ಕಾವ್ಯದಲ್ಲಿ ಪ್ರಕಟಿಸಿದ್ದಾರೆ.

ಸೆರೆವಾಸದ ಅನುಭವವು ಉತ್ತಮವಾದುದು ಎಂಬ ಭಾವದಲ್ಲಿ ಹೀಗೆ ಹೇಳಿದ್ದಾರೆ, 'ಮುಗಿಲಿಗು ಪಂಜರಮಿಗಿಲೊ.'

## VIII ನಿರ್ಭಯಾ!

ಬೇಂದ್ರೆಯವರ ಅಧ್ಯಾತ್ಮಿಕ ಜಿಜ್ಞಾಸೆಯ ಆರಂಭಿಕ ಕವನಗಳಲ್ಲಿ ಇದೊಂದಾಗಿದೆ. ಅವರು ಅನಂತಶಕ್ತ ಪರಮಾತ್ಮನನ್ನು ಕಾಣಲು ನೀರಿನ ಮೀನು ಆಗಿ ನೀರಿಗಂಜಿದರೆ ಹೇಗೆ; ನೀರಾಟಕ್ಕೆ ಆನೆಯಂತೆ ಹಾತೊರೆದು ಈಸಲು ಬರದಿದ್ದರೆ ಹೇಗೆ ಎಂದು ಪ್ರಶ್ನಿಸಿದ್ದಾರೆ. ಈ ಜೀವನವೆಂಬುದು ಮುದವಾದುದು. ಮದುವಣಿಗನನ್ನು ಹಸೆಗೆ ಕರೆಯುತ್ತಿರುವಾಗ ಸಾಹಸಿಯಾಗಿ ಅದನ್ನು ಅನುಭವಿಸಬೇಕು. 'ಇದುವೆ ಜೀವನವಲ್ಲೆ ಜೀವನಾಧಾರಾ?' ಎಂಬ ನಂಬಿಕೆಯನ್ನು ಪ್ರಶ್ನೆಯ ಮುಖಾಂತರ ನಿಜವೆಂದು ಮನನ ಮಾಡಿದ್ದಾರೆ.

## IX ಸಚ್ಚಿದಾನಂದ

ಭಾರತೀಯ ತಾತ್ವಿಕ ಚಿಂತನೆ ಹರಳುಗಟ್ಟಿದ ಬೇಂದ್ರೆ ಕಾವ್ಯದಲ್ಲಿ 'ಸಚ್ಚಿದಾನಂದ' (ರಚನೆ : ೧೯೩೨, ಮುಗದ)ವು ಒಂದಾಗಿದೆ. ಜೀವಾತ್ಮ ಪರಮಾತ್ಮ 'ಶರಣಸತಿ, ಲಿಂಗಪತಿ' ತತ್ವವು ಇಲ್ಲಿ ಸಂವಾದವಾಗಿ ಹರಿದು 'ಸಚ್ಚಿದಾನಂದ'ವಾಗಿದೆ. 'ನಾಲಗೆ', 'ಏಳುಕನ್ನಿಕೆಯರು' ಮುಂತಾದ ಕವನಗಳಲ್ಲಿ ಸಾಗಿದ ಬೇಂದ್ರೆಯವರ ಅಧ್ಯಾತ್ಮ ಚಿಂತನೆ 'ಸಚ್ಚಿದಾನಂದ'ದಲ್ಲಿ ಪಕ್ವಗೊಂಡಿದೆ.

ಸಚ್ಚಿದಾನಂದವೆಂದರೆ ಬ್ರಹ್ಮತತ್ವ, ಆಧ್ಯಾತ್ಮಿಕ ಜೀವನದ ಸಪ್ತಸ್ತರಗಳ ಅತ್ಯಂತ ಉನ್ನತಸ್ತರ. ಸತ್‌ದಿಂದ ಜಡ, ಚಿತ್‌ದಿಂದ ಪ್ರಾಣ, ಆನಂದದಿಂದ ಚೇತನ, ಅತಿಮಾನಸದಿಂದ ಮನಸ್ಸು ಹೀಗೆ ಸಚ್ಚಿದಾನಂದವೆಂದರೆ ಬ್ರಹ್ಮತತ್ವದಿಂದಲೇ ಮನುಷ್ಯನ (ಜಡ) ಅನ್ನಮಯಕೋಶ, ಪ್ರಾಣಮಯಕೋಶ, ಚೇತನ ಹಾಗೂ ಮನಸ್ಸುಸಿದ್ಧವಾದವು. ಇವೆಲ್ಲ ಮತ್ತೆ ಆರೋಹಣೆಗೊಂಡು ಸಚ್ಚಿದಾನಂದದಲ್ಲೇ ಒಂದಾಗಬೇಕಿದೆ. ಈ ರೀತಿ ಮೊದಲು ಸಚ್ಚಿದಾನಂದನಿಂದ ಅವತರಣ, ನಂತರ ಸಚ್ಚಿದಾನಂದನತ್ತ ಆರೋಹಣ ನಿರಂತರ ನಡೆಯುತ್ತಲೇ ಇದೆ.

ಇಲ್ಲಿ ಮನುಷ್ಯನ ದೇಹ, ಪ್ರಾಣ, ಚೇತನ ಹಾಗೂ ಮನಸ್ಸುಗಳಿಂದೊಡಗೂಡಿದ ಜೀವ–ಸಚ್ಚಿದಾನಂದನೊಂದಿಗೆ ಸಂವಾದ ಹೂಡಿದೆ. ಸಚ್ಚಿದಾನಂದನ ಬೆಳಕಿನೊಂದಿಗೆ ಒಂದಾಗಲು ಹಾತೊರೆಯಿತ್ತಿದೆ. ಅದಕ್ಕೆ ಉತ್ತರವಾಗಿ ಸಚ್ಚಿದಾನಂದನೂ ಉತ್ಸಾಹದ ನುಡಿಯಾಡುತ್ತಾನೆ. ಹೀಗೆ ಇಲ್ಲಿ ಜೀವ ಸತಿಯಾದರೆ ಸಚ್ಚಿದಾನಂದ ಪತಿಯಾಗಿದ್ದಾನೆ.

ಮೊಟ್ಟಮೊದಲು ಸಚ್ಚಿದಾನಂದ ಮನುಷ್ಯ ಜೀವಕ್ಕೆ ಕರೆಕೊಡುತ್ತಾನೆ. ಗಗನದಂಗಳದಲ್ಲಿ ಸತತ ಪರಿಭ್ರಮಣೆಮಾಡಲು ಆಹ್ವಾನಿಸುತ್ತಾನೆ. ಮಾನವನ ಅಂತರಂಗದಲ್ಲೆಲ್ಲ ದುಃಖ ತುಂಬಿದೆ. ಹೊರಗೇನೊ ಶಾಂತಿ ತುಂಬಿದಂತಿದೆ. ಮನುಷ್ಯನ ದೇಹ ಜಡವಾದದ್ದಾಗಿದೆ. ಅದು ಭೂಮಿಯ ಮಣ್ಣಿನಿಂದ ಉದ್ಭವವಾಗಿದ್ದರೂ ಅದರ ಮೂಲರೂಪ ಸಚ್ಚಿದಾನಂದ ಅಥವಾ ಬ್ರಹ್ಮವೇ ಆಗಿದೆ.

ಎರಡನೇ ನುಡಿಯಲ್ಲಿ ಜೀವ ಉತ್ತರಿಸುತ್ತದೆ. ನಾನು ಅದೆಷ್ಟೋ ಜನ್ಮಗಳನ್ನು ಹೊತ್ತು ಬಂದಿದ್ದೇನೆ. ಲೆಕ್ಕಕ್ಕೂ ಮೀರಿದ ಸಂಖ್ಯೆಯಷ್ಟು ಜನ್ಮಗಳು ಕಳೆದಿವೆ. ಮನುಷ್ಯ ಜನ್ಮವನ್ನೊಳಗೊಂಡು ೮೪ ಲಕ್ಷ ಸಸ್ಯ, ಪ್ರಾಣಿ ವೈವಿಧ್ಯ ರೂಪದಲ್ಲಿ ಅವತರಿಸಿದ್ದಾಗಿದೆ. ಒಂದೊಂದು ಜನ್ಮದ ಅನುಭವವೆಂದರೆ ಸಿಡಿಲನ್ನು ಒಡಲಲ್ಲಿ ಧರಿಸಿದ ಅನುಭವವೇ ಎಂದು ಮಾನವಜೀವ ಹೇಳುತ್ತದೆ. ಸಚ್ಚಿದಾನಂದನ ಉಸಿರಿನಿಂದಲೇ ಈ ಮಾನವ ದೇಹನಿರ್ಮಾಣವಾಯ್ತು. ಪೃಥ್ವಿಯ ಐದು ತತ್ವಗಳಿಂದ ಅಂದರೆ ಪಂಚಭೂತಗಳಿಂದ ಈ ದೇಹಸಿದ್ಧವಾಗಿದೆ. ಏಳು ಕಡಲುಗಳನ್ನು ದಾಟಿ ಅಂದರೆ ಸಪ್ತಸ್ತರಗಳನ್ನು ದಾಟಿ (ಜಡ, ಪ್ರಾಣ, ಮನ, ಚೇತನ, ಸತ್, ಚಿತ್, ಆನಂದ) ಸಚ್ಚಿದಾನಂದನನ್ನು ಕಾಣಬೇಕಾಗಿದೆ. ತನ್ನ ಜನನಗಳಿಗೊಂದು ಮಿತಿಯಿಲ್ಲ. ಈಗ ನೀನು ನನಗೆಬೇಕು. ಯಾಕೆಂದರೆ ನನ್ನ ಜೀವದ ಜೀವಾಳ ನೀನೇ ಆಗಿದ್ದಿ. ನನ್ನ ಜೀವದ ರಹಸ್ಯ ಯಾರಿಗೂ ಗೊತ್ತಿಲ್ಲ. ಈಗಿರುವ ಸ್ಥಿತಿಯಲ್ಲಿ; ನೋವನ್ನುಣ್ಣುವದೊಂದೇ ಜೀವಕ್ಕಿರುವ ಸ್ಥಿತಿಯಾಗಿದೆ. ಹಗಲು ಸೂರ್ಯ, ಸಂಜೆ ಚಂದ್ರನ ಆಗಮನವಾಗಿ ಮೇಲಿನಿಂದ ಸಚ್ಚಿದಾನಂದ ತತ್ವದ ಕೃಪೆ ಅಖಂಡವಾಗಿ ಸುರಿಯುತ್ತಲೇ ಇದೆ. ಎಲ್ಲ ಕಡೆಗೂ ನಿಶೆಯುತುಂಬಿದೆ. ಆದರೆ ಹೃದಯದೊಳಗೆ ಸಚ್ಚಿದಾನಂದನ ದೀಪ ಉರಿಯುತ್ತಿದೆ. ನನ್ನ ಮುಂದೆ ನಿನ್ನ ಬೆಳಕು ಇರಿಸು ಸುತ್ತಲೂ ಕತ್ತಲೆ ಒಳಗೆ ದೀಪ – ಇದು ಮನುಷ್ಯನ ದುರ್ದೈವೀಸ್ಥಿತಿ.

'ಸುತ್ತೆಲ್ಲ ಕತ್ತಲಾ ಒಳಗ ಬೆಳಗತದ ದೀಽಪಾ।
ಬಾ ಸಮೀಪಾ॥
ಇದುಯಾವ ಸೀಮೆಯಾ ಚದುರು ।
ನಿಂತಿ ನನ್ನಿದುರು ॥
ಬಿಟ್ಟ ನಿನ ನದರೋ। ಬಿಟ್ಟಿ ನಿನ ನದರು।
ಇಡು ಬೆಳಕ ಕಾಣಿಕೆ ತಂದ । ಇಟ್ಟುನನ ಮುಂದ । ಚೆಂದ ಬಿಸವಂದ
ಮಾಡಿಸೋದುಂದೋಂ – ಸಚ್ಚಿದಾನಂದ ।
ಸುತ್ತೆಲ್ಲ ಕತ್ತಲಾ ಒಳಗ ಬೆಳಗತದ ದೀಽ ಪಾಽ ।
ಬಾ ಸಮೀಪಾ.'

ಐದನೇ ನುಡಿಯಲ್ಲಿ ಪತಿಯಾದ ಸಚ್ಚಿದಾನಂದ ಮಾತನಾಡುತ್ತಾನೆ. ಇಷ್ಟೇಕೆ ನೀಹಲಬುತೀ; ಎಲೆ ಸತಿಯೇ, ನೀನುಕರೆದರೆಸಾಕು ನಾನು ಬಂದೇಬರುವೆ. ನೀನು ಕರ್ಪುರದ ಗೊಂಬೆಯಂತೆ ಇದ್ದರೆ, ನಾನು ಚಂದ್ರನಂತೆ ಬಲು ಚಂದವಾಗಿದ್ದೇನೆ. ಎಲ್ಲೆಲ್ಲಿಯೂ ಬೆಳಕಿದೆ. ಆದರೆ ನೀನೇಕೆ ಹಾಡಾಡಿಕೊಂಡು ಅಳುತ್ತೀ. ನೀನು ಶಕ್ತಿಯಾದರೆ ನಾನು ಭಕ್ತಿ. ಶಕ್ತಿ ಭಕ್ತಿಗಳ ಮಿಲನದಲ್ಲಿ ಎಲ್ಲೆಲ್ಲಿಯೂ ಬೆಳಕಿದ್ದಾಗ ಏಕೆ ಆಳುವೆ?

'ಎಲ್ಲೆಲ್ಲು ಬೆಳಕು ಇರಲಾಕ ಅಳುತಿ ನೀ ಹಾಽ ಡಿಽ ।
ಒಡಲ ಮರಿಮಾಡಿ ॥
ನೀನನ್ನ ಶಕ್ತಿ, ನಾ ಭಕ್ತಿ
ತೆರೆಯಿತಽ ಶುಕ್ತಿ
ಬೇರೆಯಿಲ್ಲ ಮುಕ್ತೀ। ಬೇರೆಯಿಲ್ಲ ಮುಕ್ತಿ।
ನಿನ ನಲ್ಲ ಎಲ್ಲಾರಾಗ ಒಂದ। ಒಂದ ನೂರೊಂದ । ಇದರ ಸವಿಮುಂದ
ತೋರುವರವಿಂದೋಂ – ಸಚ್ಚಿದಾನಂದ
ಎಲ್ಲೆಲ್ಲು ಬೆಳಕು ಇರಲಾಕ ಅಳುತಿ ನೀಹಾಽಡಿಽ ।
ಒಡಲಮರಿಮಾಡಿ॥'

ಸಚ್ಚಿದಾನಂದನು ಜೀವಕ್ಕೆ ನಿನ್ನದೇಹ, ಪ್ರಾಣ, ಮನಸ್ಸು, ಚೇತನಗಳನ್ನೆಲ್ಲ – ನನ್ನ ಬೆಳಕು, ಶಕ್ತಿ, ಜ್ಞಾನ ಆನಂದಗಳತ್ತ ತೆರೆದಿಡು – ಎಂದು ಮತ್ತೆ ಕರೆಕೊಡುತ್ತಾನೆ. 'ಎದಿಕದ ತೆರೆದಾಗ' ನಾನೂ ನೀನೂ ಮತ್ತೆ ಒಂದಾಗಿ ಹೋಗುವೆವು ಎಂದು ಸಚ್ಚಿದಾನಂದನು ಮಾನವ ಜೀವಕ್ಕೆ ಆಶ್ವಾಸನೆ ನೀಡಿದ್ದಾನೆ.

'ಒಳಹೊರಗು ಬೆಳಕು ನಾನಿರಲು ಯಾಕನಿನ ಹಣತಿಽ
ಬಾರ ನನಗೆಣತಿ ॥
ತೆರೆ ತೆರೀ ನಿನ್ನ ಎದಿಕದಾ।
ಬಂದಿತ ಹದಾ
ಕೇಳ ಈ ಪದಾ । ಕೇಳ ಈ ಪಽದಾ।
ಗುರುದತ್ತ ಸಚ್ಚಿದಾನಂದ । ಸಚ್ಚಿದಾನಂದ ಸಚ್ಚಿದಾನಂದ।
ಸಚ್ಚಿದಾನಂದೋಂ ॥ ಸಚ್ಚಿದಾನಂದ ॥'

## X ಎದೆಯ ಒಕ್ಕಲಿಗ

ಒಕ್ಕಲಿಗನು ಮಳೆಬಿದ್ದಾಗ ನೆಲದ ಬೆದೆ ಅರಿತು ಹೊಲ ಉತ್ತು, ಹದಮಾಡಿ ಬೆಳೆಯನ್ನು ಬೆಳೆಯುತ್ತಾನೆ. ಅದೇ ರೀತಿ ತನ್ನ ಹೃದಯದ ಹೊಲವನ್ನು ತನ್ನ ದೈವ

ಬೆದೆಕಂಡು ಹದ ಮಾಡಬೇಕೆಂದು ಬೇಂದ್ರೆಯವರು 'ಎದೆಯ ಒಕ್ಕಲಿಗ' ಕವನದಲ್ಲಿ ಪ್ರಾರ್ಥಿಸಿದ್ದಾರೆ. ಈ ಕವನ 'ಅವರವರ ಎದೆಯಲ್ಲಿ ಒಕ್ಕಲಾಗಿನಿಂತ ಅವರವರ ಕ್ಷೇತ್ರಜ್ಞ ಒಬ್ಬನಿದ್ದಾನೆ. ಅವನಿಗೆ ನಮ್ಮ ನಮ್ಮ ಹೊಲ ನಾವು ಒಪ್ಪಿಸಬೇಕು. ಅಂದರೆ ಕೂಳು ಕಾಣುತ್ತೇವೆ. ಇಲ್ಲದಿದ್ದರೆ ಜೀವನದುದ್ದ ಬರಗಾಲ' ಎಂಬ ಭಾವಸಂದರ್ಭ ಹೊಂದಿದೆ.

ತನ್ನ ಹೃದಯದ ಹೊಲ ತಾನೇ ತಿಳಿದವನು ಎಂಬ ಗರ್ವದಿಂದ ತಕ್ಕಲುಬಿದ್ದು ನಟ್ಟು ಅಂದರೆ ಕನಗಿನ ಹುಲ್ಲು ಬೆಳೆದಿದೆ. ಹೊಲ ಉತ್ತು ಅದನ್ನು ಕಿತ್ತು ಎಸಿ ಎಂದು 'ಕಲ್ಪತರು' ಸಮಾನನಾದ ದೇವರನ್ನು ಕವಿ ಪ್ರಾರ್ಥಿಸಿದ್ದಾನೆ.

ನನ್ನ ಕಲ್ಲಿನ ಎದೆಯು ಗಿಡ್ಡನೆಯ ಹುಲ್ಲು ಪೊದೆ ಬೆಳೆದ ಹೊಲವಾಗಿ ಹಗಲು ಇರುಳು ಯಾವುದೆಂದು ಕಾಣದೆ ಕಾಡುತ್ತಿದೆ. ಅಲ್ಲಿ ಬೇಸಾಯ ಮಾಡದಿರುವುದರಿಂದ ಹಾಗೆ ಆಗಿದೆ, ನನ್ನ ಕೈಸೋತಿದೆ. ದಯಮಾಡಿ ಅದನ್ನು ಉತ್ತು ಕಿತ್ತೆಸಿ ಎಂದು ತನ್ನ ಹೃದಯದ ಘೋರತನ ತಿಳಿಸಿ ಪ್ರಾರ್ಥಿಸಿದ್ದಾನೆ.

ಯಾರು ದುಡಿಯುವರೊ ಅವರಿಗೆ ಕೋರುಪಾಲು. ಅಂದರೆ ದುಡಿಮೆಗೆ ಪಾಲುಕೊಡುವ ಮಾತು ನಿನಗೆ ಕೊಟ್ಟಿರುವೆ. ನೀನು ನನ್ನನ್ನು ಹದಮಾಡಿ ಬೆಳೆ ಬೆಳೆದಂತೆಲ್ಲ ನಾನು ಉತ್ತಮ ಫಲನೀಡುವೆ. ಹೀಗಾಗಿ ಇಲ್ಲಿ ಮಧ್ಯಸ್ಥರು ಯಾರೂ ಬೇಡ. ಓ ಕ್ಷೇತ್ರಜ್ಞ, ಒಕ್ಕಲಿಗನೇ ನೀನು ಕರುಣೆಯನ್ನು ತೋರಿ ಕಾಪಾಡು. ಇಲ್ಲದಿದ್ದರೆ ನಾನು ಏನೂ ಬೆಳೆ ಬೆಳೆಯದೆ, ಅದನ್ನು ಉಣ್ಣದೆ ಸಾಯುವೆ ಎಂದಿದ್ದಾರೆ. ಇದೊಂದು ಆತ್ಮ ಶುದ್ಧಿಗಾಗಿ ಅಂತಃಕರಣ ತೆರೆ ಎಂದು ದೇವರಲ್ಲಿ ಪ್ರಾರ್ಥಿಸಿರುವ ವಿನೀತ ಭಾವ.

'ಕೋರ ಪಾಲಿನ ಮಾತು ಮಾಡಿಕೊಟ್ಟೆನು ನಿನಗೆ
ಯಾರೇಕೆ ಮಧ್ಯಸ್ಥರಿಲ್ಲಿ ಬೇಕು?
ಪಾರು ಮಾಡೈ ಹೊಟ್ಟೆಗಿಲ್ಲದೇ ಸಾಯುವೆನು
ತೋರು ಕರುಣದ ಕಸಬು ಎದೆಯ ಒಕ್ಕಲಿಗಾ.'

## XI ಮಲ್ಲಾಡದ ಗಿಣಿಯೆ

ಬೇಂದ್ರೆಯವರು ನಜರ್ ಬಂದ್ ಶಿಕ್ಷೆಯಲ್ಲಿ ಮುಗದ ಗ್ರಾಮದಲ್ಲಿದ್ದಾಗ (೧೯೩೨) ಬರೆದ ಈ ಕವನ ಹಲವು ಆಯಾಮಗಳಲ್ಲಿ ಅರ್ಥಾಭಿವ್ಯಕ್ತಿಯನ್ನು ಹೊಂದಿದೆ. ಅದು ಹಿಂಡನಗಲಿದ 'ಮಲ್ಲಾಡದ ಗಿಣಿ'ಯಾಗಿ 'ಮಲೆನಾಡುಬಯಲು ಸೀಮೆಗಳ ಮುಂದೆ ಹಬ್ಬಿದ ಬಟ್ಟಬಯಲಿನ ದೇಶವನ್ನು ಬಟ್ಟಗಣ್ಣು ಬಿಟ್ಟು ನೋಡುತ್ತಿದೆ.'

ಗಿಣಿಯ ಪ್ರತಿಮೆಯಲ್ಲಿ ಬೇಂದ್ರೆಯವರ ಅಂದಿನ ಸ್ಥಿತಿಯ ಚಿತ್ರಣವಿದ್ದರೂ; ಅವರ ಕಾವ್ಯಕುಶಲತೆಯಿಂದ ಅದು ತನ್ನ ವೈಯಕ್ತಿಕತೆಯನ್ನು ಕಳೆದುಕೊಂಡು ಸಾಧಾರಣೀಕರಣಕ್ಕೆ ಒಳಗಾಗಿದೆ. ಬದುಕಿನ ಅಸಹಾಯ, ಅತಂತ್ರ ದಿಕ್ಕುಗಾಣದ ಸ್ಥಿತಿ ಅಧ್ಯಾತ್ಮಿಕ ಪರಿವೇಷಕ್ಕೆ ಒಳಗಾಗುವ ಭಾವವಿದೆ.

ಉಲ್ಲಾಸ, ಆನಂದ, ಜೀವಂತಿಕೆಯ ನಾಡಾದ ಮಲೆನಾಡನ್ನು ಬಿಟ್ಟುಬಂದ ಗಿಣಿಯೊಡನೆ ಕವಿ ಸಂಭಾಷಿಸುತ್ತಿರುವುದು; ತನ್ನ ಮನದ ಗಿಣಿಯೊಡಗಿನ ಸಂಭಾಷಣೆಯಾಗಿದೆ. ಈ ಕವನದ ೨೪ ನುಡಿಗಳಲ್ಲಿ ಮೊದಲ ನಾಲ್ಕು ನುಡಿಗಳು ಆ ಮಲೆನಾಡೇ ಗಿಣಿಯಾದ ಅನುಭವವನ್ನು ನೀಡಿದೆ. ಅದು ಅಲ್ಲಾಡದೆ ಕುಳಿತದ್ದಕ್ಕೆ ಚಿಂತಿತನಾಗಿ ಕವಿ ಪ್ರಶ್ನಿಸಿದ್ದಾನೆ.

'ಮರ ಮರಕೊಂದು ಮಾತ । ಕಲಿಸಿ
ಮರವಟ್ಟೇನ ಮಾತಿನ ಜಾಣೆ.'

ಈ ನುಡಿ ಕವಿಯ ಮಾತು ನಜರ್‌ಬಂದ್ ಶಿಕ್ಷೆಯಲ್ಲಿ ಮರಗಟ್ಟಿದ ಭಾವವೂ ಆಗಿದೆ.

೫ ರಿಂದ ೮ ರ ನುಡಿಗಳಲ್ಲಿ ಅದು ಬಯಲು ಸೀಮೆಯಲ್ಲಿ ಬರಡಾಗಿ ಹಾರಲಾಗದ ಚಿತ್ರಣವನ್ನು ನೀಡಿ ಅದರ ತೀವ್ರತೆಯನ್ನು 'ನೆರಳಿಗೆಲ್ಲಿ ನೆರಳ?' ಎಂದು ಪ್ರಶ್ನಿಸಿದ್ದಾರೆ. ೯ ರಿಂದ ೧೨ ನುಡಿಗಳಲ್ಲಿ ಅದು ಪ್ರಕೃತಿ ಪರಿಸ್ಥಿತಿಗೆ ಹೊಂದಿಕೊಂಡು ಹಿಂದಿರುಗದಂತೆ ಬದುಕುವ ಆಶ್ವಾಸನೆಯಿದೆ.

'ರೆಂಬಿ ನಂಬಿಕೆ ಏಸು?। ಇನ್ನ
ಇಂಬಿಲಿ ಮುಗಿಲ ಮನಿಯ ಹುಡುಕs ।'

೧೩ ರಿಂದ ೧೬ ನುಡಿಗಳಲ್ಲಿ ಹಾರುವ ಪ್ರಯತ್ನಕ್ಕೆ 'ದಾರಿಗೆ ದಾರಿಗರಿಲ್ಲ'ದಿದ್ದರೂ 'ಆಸರಕಾಲಿಗಿಲ್ಲ'ದಿದ್ದರೂ 'ಆಗುಹೋಗಿಗೆ ಕಾವ ನಿರಲು ಕಾಗಿಗೆ ಹೆದರಿ ಕೂಡುವರೇನ' ಎಂದು ಹಾರಲು ಧೈರ್ಯ, ಹುಮ್ಮಸು ತುಂಬಿದ ಭಾವವಿದೆ. 'ಮುಗಿಲುದ್ದಕು ಕಾಯುವ ಗಾಳಿಯುಂಟು' ಎಂದು ಪರಿಸ್ಥಿತಿಯೇ ಉತ್ತಮವಾಗುವ ಪ್ರತಿಮೆಯಿದೆ. ಯಾವ ಬೀಡಾದರೂ ಕಾಯುವ ಪ್ರಾಣವಾಯುವಿದೆ, ಭಗವಂತನಿರುವ ಎಂಬ ಭಾವವಿದೆ.

೧೭ ರಿಂದ ೨೦ ನುಡಿಗಳು ಅದು ಹಾರಿ 'ಮನಸದಾಚೆ ಸೀಮಿ ಕಂಡಂಗಾಗಿ' ಅಲ್ಲಿ ಪ್ರೀತಿಸುವ ಜನ ಇರುವರೆಂಬ ಭಾವವಿದೆ. ೨೨ ರಿಂದ ೨೪ ಕೊನೆಯ ನಾಲ್ಕು ನುಡಿಗಳಲ್ಲಿ ಕವಿ ಆ ಗಿಣಿಗೆ ಗೆಣೆಯನನ್ನು ದೊರಕಿಸಿಕೊಟ್ಟಿದ್ದಾರೆ. ಆಗಿಣಿಯನ್ನು ಅವರು :

'ಹಸರುನೆಲದ ಹರಕೀ । ಹೊತ್ತ
ಕುಶಲದ ಕುವರಿ ನೀನು' ಎಂದಿದ್ದಾರೆ. ಅದರ ಹಿರಿಮೆ ಗರಿಮೆಗಳನ್ನು ನೆನಪು ಮಾಡಿಕೊಟ್ಟು 'ಹೊಸಬಾಳಿನ ಹಾಡನು ತಾರ, ಹಾರಃ' ಎಂದು ಹುರಿದುಂಬಿಸಿದ್ದಾರೆ. ಆ ಗಿಣಿಗೆ ಹೊಸಬೆಳಗು ಇದ್ದೇ ಇದೆ; ಆದಕಾರಣ ಹೊಸಸಂಸಾರ ಹೂಡು ಎಂದು ಉತ್ತೇಜನ ನೀಡಿದ್ದಾರೆ.

'ಮೂಡಣ ಕೆಂಪು ಮೂಡಿ- । ದಲ್ಲಿ
ಹೂಡ ನಿನ್ನ ಹೊಸಸಂಸಾರ । ಏ ಗಿಣಿಯೇ....'

## XII ಪಾರಿಜಾತ

'ಪಾರಿಜಾತ'ವು ದೇವದಾನವರು ನಡೆಸಿದ ಸಮುದ್ರ ಮಂಥನದಲ್ಲಿ ಬಂದ ಚತುರ್ದಶರತ್ನ ಗಳಲ್ಲೊಂದು. ಅದು ದೇವತರು, ಕಲ್ಪವೃಕ್ಷ. ಕಾಮ ಮಾಗಿ ಪ್ರೇಮವಾಗಲು ಶ್ರೀಕೃಷ್ಣ ಅದನ್ನು ಸತ್ಯಭಾಮೆಯ ಅಂಗಳದಲ್ಲಿ ನೆಟ್ಟನು ಎಂದು ಶ್ರೀಕೃಷ್ಣ ರುಕ್ಮಿಣಿ ಸತ್ಯಭಾಮೆಯರ ಕಥೆಯೊಡನೆ ಸಂಬಂಧವನ್ನು ಹೊಂದಿದೆ. ಅದು 'ಕಾಮಭಾವತೊಳೆದ' ಪ್ರೇಮಸಾಕ್ಷಾತ್ಕಾರದ ಸಾಕ್ಷಿಯಾಗಿದೆ. ಅದನ್ನು ಇಟ್ಟುಕೊಂಡವರ ಹತ್ತಿರ ಸಾವು ಸುಳಿಯುವುದಿಲ್ಲ; ನೋವು ಹುಟ್ಟುವುದಿಲ್ಲ; ಮುಪ್ಪು ಮುಸುಕುವುದಿಲ್ಲ; ಹರಯವು ಮಸುಳುವುದಿಲ್ಲ; ಕಾಂತಿ ಅಳಿಯುವುದಿಲ್ಲ. ಅದರ ಕಂಪು ಮನಸ್ಸಿನ ಅರಿವು. ಹಾಗಾಗಿ ಅದು ಬೇಂದ್ರೆಯವರಿಗೆ ದಿವ್ಯ ಜೀವನದ ಅಭೀಪ್ಸೆಯ ಕುರುಹೇ ಆಗಿದೆ. ಆ ಎಲ್ಲ ಚಿಂತನೆಗಳು ಈ ಕವನದಲ್ಲಿ ಭಾವವಾಗಿ ಹರಿದಿದೆ.

ಈ ಕವನದ ಮೊದಲ ನಾಲ್ಕು ನುಡಿಗಳಲ್ಲಿ ಬೇಂದ್ರೆಯವರು 'ಪಾರಿಜಾತ'ದ ಸೃಷ್ಟಿ, ಬಣ್ಣ, ಕಂಪನ್ನು ಬಣ್ಣಿಸಿದ್ದಾರೆ. ಅವರು 'ಪಾರಿಜಾತ'ದ ಅಪರೂಪದ ಬಣ್ಣ ಪ್ರಕೃತಿ ಲೀಲೆಯ ಒಂದು ಭಾಗದಂತೆ ಸೃಷ್ಟಿಯಾಗಿರುವುದನ್ನು ಚಿತ್ರಿಸಿದ್ದಾರೆ. ಅದು ಅರಳುವುದು ರಾತ್ರಿಯಾದುದರಿಂದ ಹಿಂದೆ ಸರಿದ ಸಂಜೆಕೆಂಪು, ಮುಂದೆ ವ್ಯಾಪಿಸಿದ ಬೆಳದಿಂಗಳು ಒಮ್ಮೈಯಾಗುವಂತೆ ಬ್ರಹ್ಮ ಈ ಹೂವನ್ನು ಸೃಷ್ಟಿಸಿದ್ದಾನೆ ಎಂದಿದ್ದಾರೆ. ಅದರಲ್ಲಿರುವ ಹಳದಿಯೂ ಸೇರಿದಂತೆ ಅದು 'ಮುಂಜಾವ ಮಸುಕು'ಗೊಂಡಂತಿದೆ. ಆ ಹೂವು ದೇವಲೋಕದ್ದು. ಹಾಗಾಗಿ ಆ ಹೂವಿನಲ್ಲಿ ಸತ್ತ್ವಭರಿತ ಹಾಡಿನ ಹೊಳಪು, ಹೆಣ್ಣಿನಕಳೆ ನೆಲಸಿ ಅದು ಮಂದಹಾಸ ಬೀರಿದೆ. ಹಾಗಾಗಿ ಅದನ್ನು ನೋಡುತ್ತಿದ್ದರೆ ದಿನದ ಆಯಾಸವೆಲ್ಲ ಪರಿಹಾರವಾಗುತ್ತದೆ.

ಆ ಹೂವನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಗಮನಿಸಿದ ಬೇಂದ್ರೆಯವರಿಗೆ ಅದರ ಕಂಪು ಮೂಗಿನ ಗ್ರಹಣ ಶಕ್ತಿಗಷ್ಟೆ ನಿಲ್ಲದೆ; ಮೈಯನ್ನು ಅಪೂರ್ವವಾಗಿ ತಂಪಾಗಿಸಿದ 'ಮನದ ಅರಿವು' ಆಗಿದೆ.

'ಮೂಗಿಗಿದರ ಕಂಪು ಬರದು
ಮೈಗೆ ಇದರ ತಂಪು ಅರಿದು
ಸುರರ ಬನದ ಹೂವು ತನದ
ತಿಳಲು, ಮನದ ಅರಿವಿದು.'

ಪ್ರಕೃತಿಯ ಕೊಡುಗೆಯಾದ 'ಪಾರಿಜಾತ' ಹೂ ರಸಿಕ ದಂಪತಿಗಳಲ್ಲಿ ಪ್ರೇಮ ಪುಷ್ಪವಾಗಿಯೂ ಅರಳಿದೆ. ಹುಡುಗೆತನದ ಸತ್ಯಭಾಮೆಯ ಅಂಗಳದಲ್ಲಿ ಬೆಳೆದು, ರುಕ್ಮಿಣಿಯ ಅಂಗಳದಲ್ಲಿ ಉದುರಿ; ಸವತಿಮತ್ಸರದ ಕಾವಿನಲ್ಲಿ ಕಾಮ ಪರಿಪಾಕಗೊಂಡು ಪ್ರೇಮವಾಗಲು ಕಾರಣವಾಗಿದೆ. ಆ ನಿರ್ಮಲ ಪ್ರೇಮದ್ಯೂತಕವಾದ ಹೂವಿನ ಬಣ್ಣನೆ ೫ ಮತ್ತು ೬ನೇ ನುಡಿಗಳಲ್ಲಿದ್ದು; ಹೂ ನಮ್ಮ ಭಾರತೀಯ ಮನಸ್ಸಿನಲ್ಲಿ ದಾಂಪತ್ಯದ ಭಾಗವಾಗಿ ತಾನೂ ವಿಕಸನಗೊಂಡು ದಂಪತಿಗಳ ಮನಸ್ಸನ್ನು ಅರಳಿಸಿದ ಸಾಕ್ಷಿಯಾಗಿದೆ. ಹೂ ಪ್ರಕೃತಿ ಪುರುಷರ ಬಾಂಧವ್ಯದ ಸೂಚಕವಾಗಿ ಅರ್ಥಪೂರ್ಣವಾಗಿದೆ.

ಅದು ನಂದನದ ಪುಷ್ಪವಾಗಿದ್ದು; ಭೂಮಿಗೆ ಅಂಟಿದ ತಕ್ಷಣ ನೆಲದ ಗುಣಗಳು ಅದರಲ್ಲಿ ಮಿಳಿತಗೊಂಡವು ಎಂದು ಕವಿವರ್ಯರು ಹೇಳಿರುವುದು ಮನುಷ್ಯ ಗುಣದ ಒಳಿತುಕೆಡುಕಿನ ಸೂಕ್ಷ್ಮ ವಿಮರ್ಶೆಯಾಗಿದೆ. ಅದು ಭೂಬಂಧನ ಪಡೆದರೂ ಪ್ರೀತಿ ಪಾತ್ರವೇ ಆಗಿದೆ. ನೆಲದ ಗುಣವೂ ಏನೂ ಗಿಡದ ರೂಪು, ಎಲೆಯ ಲಕ್ಷಣ ನೀರಸ ಶುಷ್ಕರೀತಿಯಲ್ಲಿದೆ. ಆದರೆ ಅದು ಕಲ್ಪವೃಕ್ಷವಾದುದರಿಂದ ಹೂ ಮಾತ್ರ ಮನದ ಕಂಪಾಗಿ ಪ್ರೀತಿಯ ಸೆಲೆಯಾಗಿದೆ.

'ಗಿಡವು ಬರಲು ಇಳೆಇಳಿದು
ಭುವಿಗೆ ಸರಿ ವಿಕಾರ ತಳೆದು
ಸುಮವು ಮಾತ್ರ ಮಧುರ ಗಾತ್ರ
ಪ್ರೀತಿ ಪಾತ್ರವುಳಿದಿತು.'

ಪ್ರಾರಂಭದಲ್ಲಿ ಈ ಹೂವಿನ ವರ್ಣನೆಯಲ್ಲಿ 'ಮನದ ಅರಿವಿದು' ಎಂದು ಹೇಳಿದ ಕವಿ, ಅದುರಾತ್ರಿ ಅರಳುವ ಲಕ್ಷಣಗಳತ್ತ ಗಮನ ಹರಿಸಿದ್ದಾರೆ. 'ಬುದ್ಧ, ಬುದ್ಧ, ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ' ಎಂಬ ಜ್ಞಾನಿಯ ಎಚ್ಚರ ಇರುಳಿನಲ್ಲಿರುತ್ತದೆ. ಕತ್ತಲೆಗೆ, ಅಜ್ಞಾನಕ್ಕೆ ಕಾರಣವನ್ನು ಅರಸುತ್ತ, ಕತ್ತಲ ನಕ್ಷತ್ರದೊಡನೆ ಅರಿವಿನ ಬೆಳಕನ್ನು ಶೋಧಿಸುವ ಪರಿ ಅದು.

ಈ ಹೂ ಸಹ ಚಿಕ್ಕೆಯ ಜೊತೆ ಮೂಡಿ ಮುಳುಗಿ, ಬೆಳಕನ್ನು ಇಷ್ಟ ಪಡದಿರುವುದು ಜ್ಞಾನಿಯ ರೀತಿಯಾಗಿದೆ. ಪಾರಿಜಾತ ಹೂ ವಿರಾಗದ ಸಂಕೇತವಾಗಿ, ಜ್ಞಾನಮಾರ್ಗಿಯಾಗಿ ಕವಿ ಕಲ್ಪನೆಯಲ್ಲಿ ವಿಕಾಸಹೊಂದಿದೆ.

'ಚಿಕ್ಕೆಯೊಡನೆ ಮೂಡುಮುಳುಗು;
ಆಗದದಕೆ ಹಗಲ ಬೆಳಗು;
ಜ್ಞಾನಿಯಗತಿ, ಇರುಳೊಳಗತಿ
ನಿಜ ಜಾಗೃತಿ ಇರುವದು.'

ಈ ಹೂವನ್ನು ಶ್ರೀ ಕೃಷ್ಣನು ದೇವಲೋಕದಿಂದ ತಂದದ್ದಾಗಿ, ನೆಲದ ಗುಣಲಕ್ಷಣಗಳೂ ಮೇಳೈಸಿವೆ. ಸುರಭಾವದ ಮಿದು, ನಯದೊಡನೆ 'ಸತಿ ಭಯ ಮಡದಿಯ ನಯ'ವನ್ನೂ ಹೊಂದಿದೆ ಎಂದು ಮೃದು ಹಾಸ್ಯಭಾವದೊಡನೆ ಕವಿ ಚಿತ್ರಿಸಿದ್ದಾರೆ. ರೂಕ್ಷ ಶರೀರದಲ್ಲಿ ಮೃದುಮನಸ್ಸಿನ ಜನರಿದ್ದಾರೆ. ಕಾಮ ಭಾವ ತೊಳೆದು ಪ್ರೇಮಸಾಕ್ಷಾತ್ಕಾರಕ್ಕೆ ಒಳಗಾಗುವರಿದ್ದಾರೆ. ಕತ್ತಲೆಯ ಒಡಲಿನಲ್ಲಿ ಬೆಳಕನ್ನು ಅರಸುವ ಯೋಗಿಗಳಿದ್ದಾರೆ. ಹೀಗೆ ವಿವಿಧ ಕಾಳಿಕೆ ಕಳೆದು ಶುದ್ಧಗೊಳಿಸುವ ಸಂಕೇತವಾಗಿ ಪಾರಿಜಾತವಿದೆ. ಅದನ್ನು ಸೃಷ್ಟಿಸಿದವನ ಹದ ವರ್ಣನೆಗೆ ನಿಲುಕದ್ದು ಎಂದು ಕವಿ ಉದ್ಗಾರ ತೆಗೆದಿದ್ದಾರೆ.

'ಪಾರಿಜಾತ ಹುಟ್ಟಿಸಿದನ
ಎದೆಯ ಹದವು, ಮನದ ಹದನ
ಏನುಮಾಟ, ಎಂಥ ಆಟ!
ಇದರ ಕೂಟ ತಿಳಿಯದು.'

## XIII ಮದ್ಯ

ಬೇಂದ್ರೆಯವರ 'ಮದ್ಯ' ಕವಿತೆ ಅವರು ಕಂಡ ಕನಸೊಂದರ ರಸಮಯವಾದ ವಿವರಣೆಯಾಗಿದೆ. ಅಧ್ಯಾತ್ಮ ಚಿಂತನೆಗೆ ಪೋಷಕವಾಗುವ ದಿವ್ಯತೀರ್ಥವನ್ನು ಅವರು ಕುಡಿದ ಪರಿ ಇಲ್ಲಿ ಬಣ್ಣನೆಗೊಂಡಿದೆ. ಕವಿವರ್ಯರು ತಮ್ಮ ಕನಸಿನಲ್ಲಿ ಒಂದು ದೇವಾಲಯವನ್ನು ಹೊಕ್ಕರು. ದೇವರ ಮುಂದೆ ಪರಮಾರ್ಥದ ತೀರ್ಥವಿತ್ತು. ಅದು ಹೇಗೋ ಏನೋ ಕವಿಯ ಕಣ್ಣಿಗೆ ಬಿದ್ದಿತು. ಆ ತೀರ್ಥವನ್ನು ಭಕ್ತಿಪೂರ್ವಕವಾಗಿ ಅವರು ಸೇವಿಸಿದರು. ತೀರ್ಥಸೇವನೆಯಿಂದ ಅವರ ಅಂತರಂಗವು ತೃಪ್ತಿಗೊಂಡಿತು.

ಆ ತೀರ್ಥವು ಅವರ ಜ್ಞಾನದ ಬೀಜವನ್ನು ಹನಿಹನಿಯಾಗಿ ತೇವಗೊಳಿಸಿ ಅದು ಪ್ರಕಾಶಗೊಳ್ಳವಂತೆ ಮಾಡಿದೆ. ಒಂದು ಅನುಭವದಿಂದ ಇನ್ನೊಂದು ಅನುಭವಕ್ಕೆ

ಏರುವುದು ಅಂದರೆ ಬೀಜವಾಗಿದ್ದದ್ದು ಮೊಳಕೆಯೊಡೆದು ಪ್ರಕಾಶವಾಗುವುದು. ಅದೇ ರೀತಿ ತನ್ನನ್ನು ತಾನು ತಿಳಿವ ಅರಿವೇ ಪ್ರಕಾಶ. ಅದು ಕತ್ತಲೆಯಿಂದ (ಬೀಜದ ಒಳಗೆ ಹುದುಗಿರುವ ಜೀವ ಚೈತನ್ಯ ಹೊರ ಹೊಮ್ಮುವ ಹಾಗೆ) ಹೊರ ಬರುವಿಕೆ. ಅದನ್ನು ಆಕಾರಗೊಳಿಸಲು ಬೇಂದ್ರೆಯವರು ಬೀಜದ ಪ್ರತಿಮೆಯನ್ನು ಬಳಸಿದ್ದಾರೆ. ಐಂದ್ರಯಿಕ ಅನುಭವವಾದ ಬೀಜ ಅನುಭಾವದ ಪ್ರತಿಮೆಯಾಗಿ ಚಿಗಿತಿದೆ. ಬೇಂದ್ರೆಯವರು ಹಾಗೆ ಪ್ರಕಾಶಗೊಂಡ ಚಿಗುರನ್ನು, ತೇಜವನ್ನು, ಕಂಪನ್ನು ಕಾವ್ಯದಲ್ಲಿ ಚಿತ್ರಿಸುತ್ತಲೇ ಇನ್ನೊಂದು ಅನುಭವಕ್ಕೆ ನೆಗೆದಿದ್ದಾರೆ. ಚಿಗಿತು ಹೊರಬಂದ ತ್ರಿಶೂಲದ ಪ್ರತಿಮೆಯು ಆತ್ಮದ ಮಿಂಚಾಗಿದೆ. ಅದು ಪೌರಾಣಿಕ ಪ್ರತಿಮೆಯಲ್ಲಿ ಶಿವನ ತ್ರಿಶೂಲವಾಗಿದೆ. ಶಿವನು ತ್ರಿಶೂಲದಿಂದ ಅಂಧಕಾಸುರನನ್ನು ಸಂಹಾರ ಮಾಡಿದಂತೆ ಜ್ಞಾನದಿಂದ ಅಜ್ಞಾನವನ್ನು ಸಂಹರಿಸಬೇಕು; ಬೆಳಕಿನಿಂದ ಕತ್ತಲೆಯನ್ನು ಇಲ್ಲವಾಗಿಸಬೇಕು ಎಂಬ ಚಿಂತನೆಯನ್ನು ನೀಡಿದ್ದಾರೆ.

'ಕೆಂಪು ಮಿಂಚು ಚಿಗಿತು, ಆ ತ್ರಿ-
ಶೂಲದಂತೆ ಮೂಡಿತು
ಕಂಪು ಬೀರೆ, ಗಳಿಗೆ ಮಾತ್ರ
ಕತ್ತಲೆಯೂ ಓಡಿತು.'

ಹಾಗೆ ಕತ್ತಲೆ ಹರಿದಾಗಿನ ಭಾವ 'ನಾನು' ಎಂಬ 'ಅಹಂ' ಅನ್ನು ಇಲ್ಲವಾಗಿಸಿ ಕೊಂಡು ದೇಹದ ಮಮತೆಯನ್ನು ಬಿಟ್ಟು 'ಆತ್ಮ' ಚಿಂತನೆಯಿಂದ 'ಪರಮಾತ್ಮ'ನನ್ನು ಅರಿಯುವ ವಿದ್ಯೆ. ಅದು ಮಧುವನ್ನು ಹೀರಿದಂತಹ ಮಧುರಾನುಭವ. ಅದು 'ಅಹಂ' ಅನ್ನು ಮರೆಯುವಂತೆ ಮದ್ಯವನ್ನು ಕುಡಿದಭಾವ. ಇಲ್ಲಿಮದ್ಯವು ತೀರ್ಥದ ರೂಪಕವಾಗಿದೆ. ಇಹದ ಮದ್ಯ ಪರದ ಮಧು ಕವಿಯಭಾವದಲ್ಲಿ, ನನಸು ಕನಸಿನಲ್ಲಿ ತಾಕಲಾಡಿ ಆತ್ಮಾನುಸಂಧಾನದ ಮಾರ್ಗ ಹಿಡಿದಿದೆ.

'ನನ್ನ ನಾನು ಮರೆಯುವಂತೆ
ಮದ್ಯವನ್ನು ಕುಡಿದೆನು
ತನ್ನ ತಾನು ಅರಿಯುವಂಥ
ವಿದ್ಯೆಯನ್ನು ಹಿಡಿದೆನು.'

* * * *

# ೯. ತಾಯಿ ಮತ್ತು ವಾತ್ಸಲ್ಯಗೀತೆಗಳು

ಬೇಂದ್ರೆಯವರು ವಾತ್ಸಲ್ಯಮಯಿ. ಅವರು ಮಕ್ಕಳ ನಗು–ಅಳು, ಆಟ–ಪಾಠ, ಕುಣಿತ–ಮೆರೆತ, ಮುದ್ದು–ಮಾಟದ ರಹಸ್ಯ ಅರಿತವರು. ಜೀವನದ ನಿಜಸಂತೋಷವಾದ ವಾತ್ಸಲ್ಯದಲ್ಲಿ ಮಿಂದವರು. ಅವರು ಅಮೂರ್ತ ವಾತ್ಸಲ್ಯ ಭಾವವನ್ನು ಹೃದಯಸ್ಪರ್ಶಿಯಾದ ಶಾಂತ ಸತ್ಯನೆಲೆಯಲ್ಲಿ ಅನುಭವಿಸಿ ಅದಕ್ಕೆ ಮೂರ್ತರೂಪನೀಡಿ ಸಹೃದಯರ ಮನಸ್ಸನ್ನು ಸೂರೆಗೊಂಡವರು. 'ಕರುಳಿನ ವಚನಗಳ'ಲ್ಲಿ ವಚನಕಾರರ ವಚನ ಕೌಶಲ್ಯ, ದಾಸ ಶ್ರೇಷ್ಠರ ಪದ ಜಾಣ್ಮೆಯಿದೆ. 'ಕರುಳಿನ ವಚನಗಳ'ಲ್ಲಿ ಕವಿಯ ಮನದ ಭಾವವೆಲ್ಲ ಮಿಡಿಯಾಗಿ ಕಂಪಸೂಸಿ, ಶಬ್ದಶಬ್ದ ನಾದದಲೆಯಲ್ಲಿ ತೂಗಿ, ವಾತ್ಸಲ್ಯದರ್ಶನ ನೀಡಿದೆ. ಜೊತೆ ಜೊತೆಗೆ ವಾತ್ಸಲ್ಯ ಗೀತಗಳ ಹಿಂದೆ ಜೀವ ಕುಲುಮೆಯ ತಿದಿಯಲ್ಲಿ ಕಾದ ಜೀವದ ಕಾವು, ನೋವು, ಸಿಡಿದ ಕಿಡಿಯೂ ಇದೆ. ಅವರ ವಾತ್ಸಲ್ಯ ಗೀತಗಳು ಹೆಣ್ಣು ಹೃದಯದ ಝುರಿಯಂತಿವೆ. ಬೇಂದ್ರೆಯವರನ್ನು ಆವರಿಸಿದ ಮಾತೃಭಾವದ ಕಾವ್ಯ ರೂಪ ಕರುಳಿನ ವಚನಗಳು.

### I ತಾಯಿ

ಬೇಂದ್ರೆಯವರು 'ತಾಯಿ' ಎಂಬ ಕವನದಲ್ಲಿ ತಾಯಿಯ ಮಹತ್ವವನ್ನು ಮನತುಂಬಿ ಬಣ್ಣಿಸಿದ್ದಾರೆ. ಹೆಚ್ಚು ಕಡಿಮೆ ಎಂಬುದೆಲ್ಲ ಇಚ್ಛೆಯಾಟ ಎಂದು ಹೇಳುತ್ತ, ನಮ್ಮನ್ನು ಈ ಜಗತ್ತಿಗೆ ತರುವ ಇಚ್ಛೆ ಹೊಂದಿರುವ, ತಂದು ನಮ್ಮನ್ನು ಸಲಹುವ ತಾಯಿಯೇ ಹೆಚ್ಚು ಎಂದು ಕವನದ ಮೊದಲ ಭಾಗದಲ್ಲಿ ನುಡಿದಿದ್ದಾರೆ. ಎರಡನೆಯ ಭಾಗದ ಮೊದಲ ಚರಣದಲ್ಲಿ ಇಚ್ಛೆ ಹಾಗೂ ಬಯಕೆಯ 'ಬೇನೆತಿಂದು ಬಳಲಿ ಹೆತ್ತು । ನಕ್ಕರಾರೋ ನನ್ನ ಚೆನ್ನ?' ಎಂಬ ಪ್ರಶ್ನೆ ಕೇಳಿ ಸುಮ್ಮನಾಗಿದ್ದಾರೆ. ಅದಕ್ಕೆ ಉತ್ತರ ತಾಯಿ ಎಂಬುದು ಓದುಗನಿಗೆ ಮನನವಾಗುತ್ತ ಹೋಗುತ್ತದೆ. ಹೀಗೆ ಈ ಕಾವ್ಯದಲ್ಲಿ ತಾಯಿ ಅರ್ಥವಾಗುತ್ತ ಸಾಗುತ್ತಾಳೆ. ಇದೇ ರೀತಿ ಮಗುವಿನ ಹುಟ್ಟು ಹಾಗೂ ಬೆಳವಣಿಗೆಗೆ ಕಾರಣವಾದ ವಸ್ತು ವಿಶೇಷವನ್ನು ಪ್ರತಿ ಚರಣದಲ್ಲಿರಿಸಿ, ಕೌತುಕವನ್ನುಂಟು ಮಾಡುತ್ತ – ನಕ್ಕು, ನಲಿದು, ಅಲೆದು, ಒಲಿದು, ಬೆಳೆದು ಕುಣಿವರು ಯಾರು ಎಂಬ ಪ್ರಶ್ನೆ ಎತ್ತುತ್ತ ತಾಯಿಯ ಮಹತ್ತು ಅರಿವಾಗುವಂತೆ ಮಾಡಿದ್ದಾರೆ. ಈ ಭಾಗದ ಕೊನೆಯ ಚರಣದಲ್ಲಿ :

'ನಲ್ಲನಿತ್ತ ಮುತ್ತನೊಂದ
ತನ್ನ ಹಾಲಿನಿಂದ ತೊಳೆದು

ಕಣ್ಣ ಬೆಳಗಿನಿಂದ ಬೆಳಗಿ
ಕುಣಿದರಾರೊ ನನ್ನ ಚೆನ್ನ?' ಎಂದು ಪ್ರಶ್ನಿಸಿದ್ದಾರೆ.

ಬೇಂದ್ರೆ ಕಾವ್ಯದ ಮುಖ್ಯ ಪ್ರತೀಕ 'ನಲ್'. ಅವರು 'ನಲ್' ಪದವನ್ನು ಕುರಿತು ನೀಡಿರುವ ವಿವರ ಹೀಗಿದೆ :

## ಕಾವ್ಯದ ಓಂ

"ಓಂ ಕಾರವು ವೇದಾಂತ ವಿಚಾರದಲ್ಲಿದ್ದಂತೆ 'ನಲ್' ಎಂಬುದು ಕಾವ್ಯ ವಿಚಾರದಲ್ಲಿ. 'ನಲ್' ಎಂಬ ಬೀಜಕ್ಕೆ ಬೇರೆ ಬೇರೆ ಪ್ರತ್ಯಯಗಳು ಸೇರಿ ಅದರ ವಿವಿಧ ಗರ್ಭಿತಾರ್ಥವನ್ನು ಪ್ರಕಟಗೊಳಿಸಿವೆ. ಒಂದೇ ಮಾತ್ರೆಯ ಭಿನ್ನ ಅನುಪಾನಗಳ ಮೂಲಕ ಅನೇಕ ರೋಗಗಳಿಗೆ ಉಪಶಾಮಕವಾಗಬೇಕಾದರೆ, ಮೂಲ ಮಾತ್ರೆಯಲ್ಲಿ ಬೀಜಭೂತ ಗುಣವಿರಬೇಕು.

'ನಲ್'ದಲ್ಲಿ ರಸ, ಪ್ರೀತಿ, ಸೌಂದರ್ಯ, ಆನಂದಗಳು ಅಡಕವಾಗಿವೆ: 'ನಲ್' ಬೀಜದಿಂದ ನಲಿವು=ಆನಂದ=ನಲುಮೆ=ಪ್ರೀತಿ; ನಲ್ಲ=ಸುಂದರ; ನಾಲಗೆ=ರಸಜ್ಞೆಯಾದ ಜಿಹ್ವೆ; (ನಾನ್=ಆರ್ದ್ರವಾಗು) ನಲ್ಲೆವಾಲು=ಸವಿಯಾದ ಹಾಲು, ಹೀಗೆ ಶಬ್ದ ಸಿದ್ಧಿಯಾಗಿದೆ. ನಲ್‌ದಲ್ಲಿ ರಸ, ಪ್ರೀತಿ, ಸೌಂದರ್ಯ, ಆನಂದಗಳು ಅಡಕವಾಗಿವೆ. ಕವಿಯ ಪ್ರತಿಭೆಯು ಪ್ರೀತಿಯ ರೀತಿ; ಕಾವ್ಯ ವಿಷಯವಾದ ಜಗತ್ತೆಲ್ಲ ಸೌಂದರ್ಯವು; ಅವುಗಳ ಅರಿವಿನ ಸಂಗಮವು ರಸವು; ಇವು ಮೂರಕ್ಕೂ ಆಧಾರವಾಗಿದ್ದುದು ಸೃಷ್ಟಿ, ಸ್ಥಿತಿ, ಲಯಗಳಿಗೆ ಬ್ರಹ್ಮಭೂತ ಆನಂದ. ಉಪನಿಷತ್ತು ವೇದಗಳಲ್ಲಿ 'ಮಧು' ಶಬ್ದವನ್ನು ಹೀಗೆಯೇ ಬಳಸಿದುದುಂಟು. ಆದರೆ ಅದಕ್ಕೆ ನಲ್ಲದ ಮೇಲ್ಮೆ ಬರಲಾರದು. ಇದರ ಬಣ್ಣ ಬೇರೆ, ಅದರ ಬಣ್ಣ ಬೇರೆ. ಇದರ ಧ್ವನಿ ಅದಕ್ಕಿಲ್ಲ."[೧]

ತಾಯಿಗೆ ಪ್ರಿಯವಾದ ಮಗ ನಲ್ಮೆಯವನು. ಆ ಪ್ರಿಯ ಮಗ 'ನಲ್ಲನಿತ್ತ ಮುತ್ತ'ನ್ನು ಅಂದರೆ ಮೊಲೆಯುಣ್ಣಲು ಇತ್ತ ಮುತ್ತನ್ನು ತನ್ನ ಹಾಲಿನಿಂದ ತೊಳೆದು ತನ್ನ ಕಣ್ಣ ಬೆಳಕಿನಿಂದ ಅವನನ್ನು ಬೆಳಗಿ ಕುಣಿದವಳು ತಾಯಿ– ಎಂದು ತಾಯಿಯ ನಲ್ಮೆಯನ್ನು ಬಣ್ಣಿಸಿದ್ದಾರೆ. ಅವಳು ತಾನು ಹೆತ್ತ ಜೀವವನ್ನು ಪೋಷಿಸಿ ಸಂತಸಪಡುವ ವರ್ಣನೆ ಈ ಭಾಗದಲ್ಲಿದ್ದರೆ, ಮೂರನೆಯ ಭಾಗದಲ್ಲಿ ಅದರ ಮುಂದಿನ ಹಂತವಾದ ತಾಯಿಯ ಮಾತಿನ ಮಹತ್ವವಿದೆ. ಬೇಂದ್ರೆಯವರು 'ತಾಯಿಗಿಂತದಾರು ಹೆಚ್ಚು?' ಎಂಬ ಪ್ರಶ್ನೆಹಾಕಿ ಉತ್ತರವಾಗಿ : 'ತಾಯಿಗಿಂತ ತಾಯಿ ಬಾಯಿ' ಎಂದಿದ್ದಾರೆ. ಹೀಗೆ ಹೇಳಲು ಕಾರಣ ತಾಯಿಯ ಬಾಯಿಯ ಮಾತು ನಮ್ಮನ್ನು ರೂಪಿಸಿರುವುದು.

---

೧. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ – ಪು. ೧೯೧

'ಮಾತಿನೊಂದು ಮಂತ್ರದಿಂದ
ನಮ್ಮ ದೇಹ ಯಂತ್ರನಡೆಸಿ-
ದಂಥ ನಮ್ಮ ತಾಯ ಬಾಯ
ಆs ಮಾತೆ ಜನ್ಮದಾತೆ!'

ಎಂದು ಅವರು ನುಡಿವಲ್ಲಿ 'ಮಾತೆ' ಎಂಬ ನುಡಿ. ಮಾತು ಆಗಿ ಮಾತೆಯೂ ಆಗಿ ಶ್ಲೇಷಾರ್ಥದಿಂದ ತಾಯಿ ಮತ್ತು ಅವಳ ಮಾತು ಎರಡೂ ಶ್ರೇಷ್ಠ ಎಂಬುದು ಮನವರಿಕೆಯಾಗುತ್ತದೆ.

ಮಾತು ಬರುವುದೇ ದ್ವಿಜತ್ವ

'ಒಡಲಹುಟ್ಟು ಮೊದಲಹುಟ್ಟು;
ಮಾತಿನಿಂದ ಪೂತನಾಗಿ
ತಾಯಿಮನದ ಮೂರ್ತಿಯಾಗಿ
ಅವಳ ಎದೆಯ ಗರ್ಭಗುಡಿಯ
ಮಿಣುಕು ಮಿಣುಕು ಬೆಳಕಿನಲ್ಲಿ
ಮುಗುಳ ನಗೆಯನರಳಿಸುತ್ತ
ನಿಲ್ಲಲಾಗ ಮರಳು ಹುಟ್ಟು,
ಆ ಹುಟ್ಟೆ ನಮ್ಮ ಹುಟ್ಟು-
ನಮ್ಮ ಜನ್ಮದೆಲ್ಲ ಗುಟ್ಟು
ಅಲ್ಲಿ ಇಹುದು ಅಲ್ಲೆ ಇಹುದು.'

ತಾಯಿಗೆ ಮಗುವಿನ 'ಒಡಲಹುಟ್ಟು ಮೊದಲ ಹುಟ್ಟು.' ಆದರೂ ಅವಳಿಗೆ ನಿಜವಾದ ಸಂತಸವಾಗುವುದು ಅವನು ಎರಡನೇ ಹುಟ್ಟು ಪಡೆದಾಗ ಅಂದರೆ ಅವನಿಗೆ ಮಾತು ಬಂದಾಗ. ಆಗ ಅವಳು ಆನಂದ ತುಂದಿಲಳಾಗಿ ಅದನ್ನು ಎಲ್ಲರೊಂದಿಗೆ ಹೇಳಿ ಸಂಭ್ರಮದಿಂದ ಕುಣಿದು ಹಬ್ಬದಾನಂದವನ್ನು ಪಡೆಯುತ್ತಾಳೆ. ಅದು ಅವಳಿಗೆ ತನ್ನ ಮಗುವಿನ ಅಸ್ತಿತ್ವದ ಬಗ್ಗೆ ಧೈರ್ಯವನ್ನು ನೀಡುತ್ತದೆ. ಅವನು ಮೂಕನಾಗಿ ಹೋದರೆ ಅವನು ಒಡಲದೇಹ ಮಾತ್ರ ಪಡೆದವನಾಗಿ ಅಪೂರ್ಣ ವ್ಯಕ್ತಿಯಾಗಿ ಹೋಗುತ್ತಾನೆ. ಅವನು ತಾಯಿಗೂ ಇತರರಿಗೂ ಹೊರೆಯಾಗುತ್ತಾನೆ. ಅದನ್ನು ಅರಿತ ತಾಯಿ ಮೊಲೆಹಾಲನ್ನು ಕುಡಿಸುವಾಗ ನುಡಿಯ ಸವಿಯನ್ನೂ ಉಣ್ಣಿಸುತ್ತಾಳೆ. ಅವನು ಮಾತನಾಡಿದಾಗ ಅವನು ಪೂತನಾದಂತೆ. ಪೂತದ ಅರ್ಥ Made clean or pure.

ವೈದಿಕ ಸಂಪ್ರದಾಯದಂತೆ ಉಪನಯನ ವಿಧಿಯು ಮಗುವಿನ ದ್ವಿಜತ್ವ ಆಗುತ್ತದೆ. ಏಕೆಂದರೆ ಅವನು ಇನ್ನು ಮುಂದಿನ ವಿದ್ಯಾಭ್ಯಾಸವನ್ನು ಗುರುಮನೆಯಲ್ಲಿ ಪ್ರಾರಂಭಿಸಬೇಕಾಗುತ್ತದೆ. ಮನೆಬಿಟ್ಟು ಹೊರಡುವಾಗ ಉಪನಯನ ವಿಧಿಯಲ್ಲಿ ತಂದೆಯಿಂದ ಗಾಯತ್ರಿಮಂತ್ರದ ಉಪದೇಶ ಪಡೆಯುತ್ತಾನೆ. ತಾಯಿಯ ಎಂಜಲತುತ್ತನು ಕೊನೆಯದಾಗಿ ಸೇವಿಸುತ್ತಾನೆ. ಬೇಂದ್ರೆಯವರ ದೃಷ್ಟಿಯಲ್ಲಿ ಈ ವಿಚಾರ ಸಂಪೂರ್ಣವಾಗಿ ಸ್ವತಂತ್ರರೂಪತಾಳಿ ಮಗುವಿಗೆ ಮಾತು ಬರುವುದೇ ದ್ವಿಜತ್ವ ಎಂದಿದ್ದಾರೆ. ತಾಯಿಯು ಮಾತು ಕಲಿಸುತ್ತ ಎರಡನೇ ಹುಟ್ಟನ್ನು ದಯಪಾಲಿಸುತ್ತಾಳೆ. ಅವಳ ಈ ಮಹಿಮೆಗೆ ಬೇಂದ್ರೆ ಮಹತ್ವಕೊಟ್ಟಿದ್ದಾರೆ. ಮಾತು ಬರುವ ಮಗು ಎಲ್ಲರ ಆಕರ್ಷಣೆಯ ಕೇಂದ್ರವಾಗುತ್ತದೆ. ಮಾತು ಬಾರದ ಮಗು ಹಾಸ್ಯಕ್ಕೆ ಗುರಿಯಾಗುತ್ತದೆ. ಆದುದರಿಂದ ಮಾತುಬಲ್ಲ ಮಗು ಪೂತವಾಯ್ತು, ಅರಳಿತು, ಪವಿತ್ರವಾಯ್ತು ಎಂಬ ಆನಂದದ ಅಭಿವ್ಯಕ್ತಿಯನ್ನು ಕವಿಕೊಟ್ಟಿದ್ದಾರೆ. ಈ ಚಿಂತನೆ ವೈದಿಕ ನಿಲುವನ್ನು ಮೀರಿ ವಿಶ್ವವ್ಯಾಪಿ ನಿಲುವನ್ನು ತಲುಪುವುದು ಬೇಂದ್ರೆ ಕಾವ್ಯದ ಹಿರಿಮೆಯಾಗಿದೆ.

ತಾಯಿಯ ಹೃದಯ ತುಂಬಾ ಮೃದು. ಅಲ್ಲಿಯ ಬೆಳಕು ಶಾಂತ ಸುಂದರವಾದುದು. ಅದನ್ನು ಮಿಣುಕು ಹುಳುವಿನ ರೂಪಕದಿಂದ 'ಮಿಣುಕು ಮಿಣುಕು ಬೆಳಕು' ಎಂದಿದ್ದಾರೆ. ಆ ಬೆಳಕಿನಲ್ಲಿ ಮುದ್ದು ಮುದ್ದು ಮಾತಿನಿಂದ 'ಮುಗುಳು ನಗೆಯನರಳಿಸುತ್ತ ನಿಲ್ಲಲಾಗ' ಎನ್ನುವ ಭಾವದಲ್ಲಿ ಮಗು ಮರುಸೃಷ್ಟಿ ಪಡೆದು ಮೂರ್ತಿಯಾದುದರ ಸ್ಪಷ್ಟತೆ ಇದೆ. ಅದು ಆಗ 'ತಾಯಿಮನದ ಮೂರ್ತಿಯಾಗುತ್ತದೆ'. ಮಗು ಅರಳಿದ್ದು ಮಾತಿನಿಂದ ಮರಳುತ್ತಿದೆ. ಅಂದರೆ ಮತ್ತೆ ಅರಳುತ್ತಿದೆ, ಅಂದರೆ 'ಮರಳುಹುಟ್ಟು' ಪಡೆಯುತ್ತಿದೆ ಎಂದು ಅರ್ಥ.

## ತಾಯಿಯ ಪ್ರೀತಿ ಮತ್ತು ರೀತಿ

ಕವನದ ನಾಲ್ಕನೆಯ ಭಾಗದಲ್ಲಿ ತಾಯಿ ಮತ್ತು ತಾಯಿಯ ಮಾತಿಗಿಂತ ಹಿರಿದಾದುದು ಏನು ಎಂಬ ಪ್ರಶ್ನೆಗೆ ಬೇಂದ್ರೆಯವರು 'ಅವಳ ಪ್ರೀತಿ ಮತ್ತು ಅವಳ ರೀತಿ' ಎಂದಿದ್ದಾರೆ. ಮಾತು ಬಂದ ತಕ್ಷಣ ಆ ಮಗುವಿಗೆ ಅಂದಿನವರೆಗೆ ಕುತೂಹಲದ ಕಣ್ಣಾಗಿದ್ದುದೆಲ್ಲ ಪ್ರಶ್ನೆಯಾಗುತ್ತದೆ. ಅದಕ್ಕೆ ತಾಯಿಯಾದವಳು ಪ್ರೀತಿಯಿಂದ ಉತ್ತರವನ್ನು ನೀಡಬೇಕು. ಹಾಗೆ ಪ್ರಶ್ನೆ ಕೇಳಿ ಉತ್ತರವನ್ನು ಪಡೆಯುವುದರಲ್ಲಿಯೇ ಆ ಮಗು ಅವಳ ರೀತಿಯನ್ನು ಅಂದರೆ ಅವಳ mode, manner, fashionಗಳನ್ನು ಗಮನಿಸತೊಡಗಿ ಅವಳ ರೀತಿಯಂತೆ ತನ್ನ ಸ್ವಭಾವವನ್ನು ರೂಪಿಸಿಕೊಳ್ಳುತ್ತದೆ. ಆದಕಾರಣ ಈ ಹಂತದಲ್ಲಿ ತಾಯಿಯ ರೀತಿ, ನಡತೆ ತುಂಬಾ ಮುಖ್ಯವಾಗುತ್ತದೆ. ಹೀಗಾಗಿ ಬೇಂದ್ರೆಯವರು ಈ ಹಂತದಲ್ಲಿ 'ಅವಳ ಪ್ರೀತಿ ಅವಳ ರೀತಿ' ಹೆಚ್ಚು

ಮುಖ್ಯವಾಗುತ್ತದೆ ಎಂದಿದ್ದಾರೆ. ಮಗನು ಕೀರ್ತಿವಂತನಾಗಬೇಕು ಎಂಬ ಸ್ವಾರ್ಥ ತಾಯಿಯ ಪ್ರೀತಿಯಾಗಿ ರೂಪತಾಳುತ್ತದೆ. 'ರೀತಿರಾತ್ಮಾ ಕಾವ್ಯಸ್ಯ' ಎಂಬುದು ಕಾವ್ಯಶಾಸ್ತ್ರದ ಒಂದು ಸೂತ್ರ. ರೀತಿ ಎಂಬುದು ಆತ್ಮದ ಪ್ರತೀಕ. ಮಗು ಆತ್ಮಾಂಶ ಎಂಬುದು ಸುಳ್ಳಲ್ಲ. ತಾಯಿಯ ರೀತಿ, ನೀತಿ, ನಡತೆಯೇ ಮುಖ್ಯ ಎಂಬ ದೃಷ್ಟಿಯಿಂದ ಅವುಗಳಿಗೆ ಬೇಂದ್ರೆಯವರು ಆತ್ಮದ ಉನ್ನತಿಯನ್ನು ಕೊಟ್ಟಿದ್ದಾರೆ. ಈ ಜಗತ್ತಿನಲ್ಲಿ ಯಾವಾಗ ಜನನ ಎಂಬುದು ಶುರುವಾಯಿತೊ ಅಂದಿನಿಂದ 'ಕಡಲಿನೊಡಲ ಸಿಂಪಿನಂತೆ' ತಾಯಿ ಮಗುವನ್ನು ಹೆತ್ತು ಸಲಹುತ್ತಿದ್ದಾಳೆ. ಅವಳೇ 'ನನ್ನ ನಿನ್ನ ಅವನ ತಾಯಿ' ಎಂದು ತಾಯಿಯ ಬಗೆಗಿನ ಸಾರ್ವಕಾಲಿಕ ಸತ್ಯವನ್ನು ಸಾರಿದ್ದಾರೆ.

ಈ ಕವನದ ಕೊನೆಯ ಭಾಗವು ಜೀವನದಲ್ಲಿರುವ ಉಪ್ಪು ನೀರ ಬಾಳನ್ನು ಕಾಣಿಸುತ್ತ, ಅದನ್ನು ಗೆಲ್ಲುವ ಮಾರ್ಗಯಾವುದು ಎಂಬ ಪ್ರಶ್ನೆಯನ್ನು ಎತ್ತಿದೆ. ಈ ಉಪ್ಪು ನೀರ ಬಾಳನ್ನು ತೊರೆಯುವ ಹಾಗಿಲ್ಲ. ಆದಕಾರಣ ಬೇಂದ್ರೆಯವರು ಒಂದು ರೂಪಕದಿಂದ ಅದರ ಪರಿಹಾರವನ್ನು ಸೂಚಿಸಿದ್ದಾರೆ. 'ಕಪ್ಪುನೀರ ಕುಡಿಯಬಹುದು' ಅಂದರೆ ಒಂದು ಕಪ್ಪು (cup) ನೀರನ್ನು ಕುಡಿಯಬಹುದು. ಅದು ಪ್ರತಿಯೊಬ್ಬನ ಮಿತಿ ಮತ್ತು ಉಳಿವಿಗೆ ಬೇಕಾದುದು. ಆದರೆ ಅದು ಉಪ್ಪು ಉಪ್ಪು ಆದಾಗ ಕುಡಿಯಲು ಸಾಧ್ಯವಿಲ್ಲ. ಹೀಗಿರುವಾಗ ಬಾಳೆಲ್ಲ ಉಪ್ಪು ನೀರಾದಾಗ ಬದುಕುವುದು ಹೇಗೆ ಎಂಬ ಪ್ರಶ್ನೆ ಏಳುತ್ತದೆ. ಅದಕ್ಕೆ ಬೇಂದ್ರೆಯವರು ತಾಯಿಯ ನಗೆಯ ಅಮೃತ ಈ ಉಪ್ಪುನೀರ ಬಾಳನ್ನು ಸುಖಮಯವಾಗಿ ಮಾಡಲು ಶಕ್ತವಾಗಿದೆ ಎಂದು ಹೇಳಿದ್ದಾರೆ.

ಯಾರ ಸಂಸಾರವೂ ಅಮೃತವಲ್ಲ; ಸಂಸಾರದಲ್ಲಿ ಅಮೃತದಂಥ ಸಿಹಿತೆರೆಗಳು, ದುಃಖದ ಉಪ್ಪುಪ್ಪು ತೆರೆಗಳು ಏರೇರಿ ಬರುತ್ತವೆ. ಹಾಗೆ ಬಂದಂತಹ ವಿವಿಧ ತೆರೆಗಳನ್ನು ತಾಯಿ ನಗೆಮುಖದಿಂದ ಸ್ವಾಗತಿಸುತ್ತಾಳೆ. ಆದರೆ ಆ ನಗೆ ಬಹಳ ಕಾಲ ಉಳಿಯುವುದಿಲ್ಲ. ಬುರುಗಿನಂತೆ ಕಂಡು ಕರಗಿಹೋಗುತ್ತದೆ. ಇದನ್ನು ಮೀರಿ ಆನಂದ ಪಡೆಯುವ, ಆನಂದಕೊಡುವ ಶಕ್ತಿ ತಾಯಿಯಲ್ಲಿ ಇರುತ್ತದೆ ಎಂಬುದು ಕವಿಯ ಅನುಭವ.

## II ತಾಯಿ–ಕೂಸು

'ತಾಯಿಯ ಮೈಯು ಕೆಲಸದಲ್ಲಿ ತೊಡಗಿದಾಗಲೂ, ಜೀವ ಕೂಸಿನಲ್ಲಿರುತ್ತದೆ. 'ಒಡಲೆರಡು ಜೀವವೊಂದು' ಎಂಬ ಈ ಕರುಣ ಮಧುರಾನುಭವವನ್ನು ತಾಯಿಯಂತೆ ಕಂಡವರಾರು?' ಎಂಬ ಭಾವಸಂದರ್ಭವನ್ನು ಹೊಂದಿದ 'ತಾಯಿಕೂಸು' ಕವನದ ತಾಯಿಗೆ ಸದಾ ಕೂಸಿನದೆ ಚಿಂತೆ. ಹೀಗಾಗಲು 'ತಾಯಿ ಮಗುವಿನ ಸಂಬಂಧದಲ್ಲಿ

ಶಾರೀರಿಕ ಏಕತೆಯು ಇರುವುದರಿಂದ ಅವರಿಬ್ಬರಲ್ಲಿ ಅತ್ಯಂತ ನಿಕಟವಾಗಿ ಸ್ಥೂಲ ಹಾಗೂ ಸ್ಪರ್ಶವೇದ್ಯ ಸಂಬಂಧವಿರುತ್ತದೆ.'[೧] ಎಂದು ಶ್ರೀಮಾತಾ ಅವರು ನುಡಿದಿದ್ದಾರೆ. 'ಹಸುಗೂಸು ಹಸಿವು ಭಯ ಮುದ್ದಾಟ'ವಿಲ್ಲದ ಕನಸಿನಾಚೆಗೆ ಇರುವ ನಿದ್ದೆಯಲ್ಲಿರುವಾಗ ಆ ನಿದ್ದೆಯ ಸ್ಥಿತಿಯನ್ನು ಬೇಂದ್ರೆಯವರು:

'ಉಸಿರದಾರದ ತುದಿಗೆ
ಹಾರು ಹಕ್ಕಿಯ ಬದಿಗೆ
ಜೀವಪಟ ಹೆಡೆಯಾಟವಾಡುತಿಹುದು' ಎಂದು ಬಣ್ಣಿಸಿದ್ದಾರೆ.

ಮಗುವಿನ ಹಕ್ಕಿಗೊರಲನ್ನು, ಮೃದು ಮನಸ್ಸನ್ನು ಅರಿತು ಅದನ್ನು ಹಕ್ಕಿಯ ಸಂಗಾತಿಯಾಗಿಸಿದ್ದಾರೆ. ಈ ಬಗೆಯ ಆಟ 'ಮೇಲ್ಮುಗಿಲ ಗಾಳಿಯಲಿ। ತನ್ನೊಂದು ಲೀಲೆಯಲಿ। ತೀರಲದು ತಾನೆ ಇಳೆ ಗಿಳಿಯಲಹುದು.' ಹೀಗೆ ಮಗು ನಿಶ್ಚಿಂತೆಯಾಗಿ ಮಲಗಿದ್ದರೂ ತಾಯಿಗೆ ಆ ಕೂಸಿನದೆ ಚಿಂತೆ.

'ಕೆಲಸದಲಿ ಬಿಡುವಿಲ್ಲ
ಕೂಸಿನಲಿ ಮನವೆಲ್ಲ
ತಾಯಿ ಯೋಗಿನಿ ಮೈಲಿ ದುಡಿಯುತಿಹಳು'

ಇಲ್ಲಿಯ 'ಮೈಲಿ' ಎಂಬ ಪದ ಶ್ಲೇಷಾರ್ಥದಲ್ಲಿದ್ದು, ತಾಯಿಯೋಗಿನಿಯು ತನ್ನ ಮೈಯನ್ನು ದುಡಿಮೆಯಲ್ಲಿ ತೊಡಗಿಸಿರುವುದು ಒಂದು ಅರ್ಥವಾದರೆ; ಇನ್ನೊಂದು ಅರ್ಥ ದುಡಿಯುವ ಹೆಂಗಸರು ಮಗುವನ್ನು ಬಿಟ್ಟು ಮೈಲಿದೂರ ದುಡಿಯುತ್ತಿರುವ ಚಿತ್ರಣವನ್ನು ನೀಡುತ್ತದೆ. ಹೀಗೆ ದುಡಿಯುವ ತಾಯಿ ತನ್ನ ಒಡಲಕುಡಿಯನ್ನು ಸದಾ ತನ್ನ ಮನದಲ್ಲಿ ತೂಗುತ್ತಾಳೆ ಎಂದಿದ್ದಾರೆ ಬೇಂದ್ರೆಯವರು. 'ತನ್ನದೆಯ ತೊಟ್ಟಿಲಲಿ। ಕಂದನನು ಇಟ್ಟಲ್ಲಿ। ಕಂಠದಲಿ ಜೋಗುಳವ ನುಡಿಸುತಿಹಳು.' ಇದು ತಾಯಿಯ ಹೃದಯದ ಮಿಡಿತವನ್ನು ಅರಿತು ನುಡಿದ ಬೇಂದ್ರೆ ಭಾವಲಹರಿ.

## III ಯಾರಿಗೂ ಹೇಳೋಣು ಬ್ಯಾಡಾ

ಬೇಂದ್ರೆಯವರ 'ಯಾರಿಗೂ ಹೇಳೋಣು ಬ್ಯಾಡಾ.' (ರಚನೆ : ೧೯೨೭) ಕವನವು ಪಿತೃಭಾವ ಮಕ್ಕಳಲ್ಲಿ ನಲಿದಾಡಿದಂತಿದೆ. 'ಯಾರಿಗೂ ಹೇಳೋಣು ಬ್ಯಾಡಾ' ನುಡಿ ನಾಲಗೆಯ ಮೇಲೆ ಹೊಮ್ಮುತ್ತಲೆ ಮನಸ್ಸು ಆ ಲಯಕ್ಕೆ ಹೊಂದಿಸಿ ನಲಿವ

---

೧. ಶ್ರೀ ಅರವಿಂದರು ಮತ್ತು ಶ್ರೀಮಾತೆ, 'ಸ್ತ್ರೀ ಶಕ್ತಿ' (ಅನಾ) ಆರ್. ಜಿ. ಕುಲಕರ್ಣಿ. ಶ್ರೀ ದ.ರಾ. ಬೇಂದ್ರೆ ಸ್ನೇಹಮಂಡಲಿ, ಬೆಂಗಳೂರು – ೧೯೬೮ ಪು.೪೨

ಮಾಂತ್ರಿಕತೆಯನ್ನು ಹೊಂದಿದೆ. 'ಮಕ್ಕಳಿಗೆ ತಾವು ಪ್ರಕಾಶವಾಗಿ ಆಡುವ ಮಾತು, ನಡೆಸಿದ ಆಟ ಜನಾಂತಿಕದಂತೆ ಒಂದು ಕಣ್ಣು ಮುಚ್ಚಣಿಕೆ ಆಟವಾಗಿ ರಮ್ಯವೆನಿಸುವದು. ಅಂತೆಯೇ ಅವರಿಗೆ ಅಜ್ಜಿ ಹೇಳುವ ಯಕ್ಷಗಂಧರ್ವ ಕತೆಗಳ ಅಗಮ್ಯ ಆಕರ್ಷಣೆ. ಇಲ್ಲಿ ಒಂದು ಮುದ್ದು ಮಗುಜೀವಕ್ಕೆ, ಅದರ ಅಂತರಂಗವನ್ನರಿತ ಒಂದು ಕವಿ-ಜೀವ, ಈ ಕಲ್ಪನೆಯ ಕವನ ಹೇಳುತ್ತಿದೆ' ಎಂಬ ಭಾವಸಂದರ್ಭವಿದೆ.

'ಯಾರಿಗೂ ಹೇಳೋಣು ಬ್ಯಾಡಾ
– ಯಾರಿಗೂ'

ಎಂಬ ಪಲ್ಲವಿ ಮಗುವಿಗೆ ಕವಿಯ ಕುತೂಹಲದ ನುಡಿಯಾಗಿ ಅದರ ಗಮನವನ್ನು ತನ್ನತ್ತ ಸೆಳೆವ ಆತ್ಮೀಯ ಭಾವಲಹರಿಯಲ್ಲಿದೆ. ಈ ಕವನವು ಕಲ್ಪನಾಲೋಕಕ್ಕೆ ಮಗುವನ್ನು ಕರೆದುಕೊಂಡು ಹೋಗುವ ಸುಂದರ ಕನಸಿನಂತಿದೆ. ಆ ಲೋಕದ ಪ್ರತಿಮೆಯಾಗಿ 'ಹಾರಗುದರಿ' ಜಿಗಿವ ಚೈತನ್ಯವಾಗಿದೆ. ಆ ಕಲ್ಪನೆಯ ಕುದುರೆಯನ್ನು ಏರಿದ ಮಗುವಿನ ಉತ್ಸಾಹ, ಉಲ್ಲಾಸ ದೂರ ದೂರ ಸಾಗಿ ನಲಿವ ಅನಂತ ಆನಂದವಾಗಿದೆ.

'ಹಾರಗುದರೀ ಬೆನ್ನಽಏರಿ
ಸ್ವಾರರಾಗಿ ಕೂತುಹಾಂಗಽ
ದೂರ ದೂರಾ ಹೋಗೋಣಂತಽ । ಯಾರಿಗೂ'

ಮುದ್ದು ಮಗುವಿನ ಹೂ, ಹಣ್ಣಿನ ಮೈಮನಸ್ಸು ಇಲ್ಲಿನ ಕಾವ್ಯ ಪ್ರತಿಮೆಗಳಲ್ಲಿ ಕಂಪು, ಸೊಂಪನ್ನು ಬೀರಿವೆ. ಆ ಮಗು ಮತ್ತು ಚೆನ್ನತೋಟದ ಹೂವು, ಹಣ್ಣು ಒಂದೇಆಗಿ ಸವಿಯಾಗಿವೆ. ಆ ರುಚಿ ಅಪ್ಪ ಮಕ್ಕಳಿಗಷ್ಟೇಗೊತ್ತಾಗಿ ಇತರರಿಗೆ ತಿಳಿಯಬಾರದು ಎಂಬ ಭಾವದಲ್ಲಿ ನಗೆಯು ಚಿಮ್ಮಿ ಹೊಮ್ಮಿದೆ.

'ಹಣ್ಣು ಹೂವು ತುಂಬಿದಂಥ
ನಿನ್ನ ತೋಟ ಸೇರಿ ಒಂದಽ
ತಿನ್ನೋಣಂತ ಅದರ ಹೆಸರು । ಯಾರಿಗೂ'

ಇಲ್ಲಿಯ 'ಮಲ್ಲಿಗಿ ಮಂಟಪ', 'ಹಾವಿನಮರಿ', 'ಹೂವೆಹೂವೂ ಹಸಿರೆ ಹಸಿರು' ಪ್ರತಿಮೆಗಳು ಸುಂದರ ಬನದಲ್ಲಿ ಕುಣಿದು ನಲಿದ ಅಪ್ಪಮಕ್ಕಳ ಆನಂದವನ್ನು ಸಂಕೇತಿಸಿವೆ.

ಕವಿಯು ಮಗುವಿಗೆ ಕನಸಿನೂರಿನ ವೈಭವ ಇಷ್ಟೇ ಅಲ್ಲ; ಇನ್ನೂ ಸಾಕಷ್ಟಿದೆ. ಅಲ್ಲಿಗೆ 'ಸದ್ದು ಮಾಡದೆ ಸಾಗೋಣ' ಎಂದಿದ್ದಾರೆ. ಅದು ಮಗುವನ್ನು ಉದ್ದೇಶಿಸಿ ಹೇಳಿದ ನುಡಿಯಾದರೂ ಕಾವ್ಯಲಕ್ಷಣವನ್ನು ಅದರ ಅನಂತ ವಿಸ್ತಾರವನ್ನೂ ಸೂಚಿಸುವ ನುಡಿಯಾಗಿದೆ.

'ನಿದ್ದೆ ಮಾಡಿ, ಮೈಯಬಿಟ್ಟು
ಮುದ್ದು ಮಾಟದ ಕನಸಿನೂರಿಗೆ
ಸದ್ದು ಮಾಡದೆ ಸಾಗೋಣಂತs । ಯಾರಿಗೂ'

* * * *

# ೧೦. ಸ್ನೇಹ ಗೀತೆ : ಚೆನ್ನ

ಹಲಸಂಗಿಯ ಚೆನ್ನಮಲ್ಲಪ್ಪ ಅವರು ಗೆಳೆಯರಗುಂಪಿನ ಅನುಭಾವಿ ಕವಿ. ಅವರ ಕಾವ್ಯನಾಮ 'ಮಧುರಚೆನ್ನ'. ಬೇಂದ್ರೆಯವರು ಮತ್ತು ಅವರು ಅಣ್ಣ ತಮ್ಮಂದಿರಂತಿದ್ದರು. ಅವರಿಬ್ಬರೂ ಶ್ರೀ ಅರವಿಂದರ ಚಿಂತನೆಗೊಳಗಾದ ಕವಿಗಳು. ಬೇಂದ್ರೆಯವರು ಶ್ರೀ ಅರವಿಂದರ ಕಾವ್ಯ ಮಾರ್ಗದ ಸಾಧಕರಾದರೆ, ಮಧುರಚೆನ್ನರು ಅವರ ಅಧ್ಯಾತ್ಮ ಮಾರ್ಗದ ಯೋಗಸಾಧಕರಾದರು. ನವೋದಯ ಕಾವ್ಯದ ಪ್ರಾರಂಭದಲ್ಲಿ ೧೯೩೩ರಲ್ಲಿ ಪ್ರಕಟವಾದ ಅವರ 'ನನ್ನನಲ್ಲ' ಕವನ ಸಂಕಲನ ಅನುಭಾವ ಕಾವ್ಯವಾಗಿದೆ. ಅವರು ಲೌಕಿಕ ಜೀವನದ ಕೌಟುಂಬಿಕ ಪರಿಸರದಲ್ಲಿಯೇ ಇದ್ದು ಆತ್ಮಶೋಧನೆಗೆ ತೊಡಗಿದ ಸಾಧಕರಾಗಿದ್ದರು. ಬೇಂದ್ರೆಯವರು 'ಚೆನ್ನ' ಕವನದ ಭಾವಸಂದರ್ಭದಲ್ಲಿ 'ಗೆಳೆಯ ಮಧುರ ಚೆನ್ನರಿಗೂ ನನಗೂ ಇರುವ ಒಳಜೀವ ಸಂಬಂಧವನ್ನು ಕುರಿತು ರೂಪುಗೊಂಡು ಬಂದ ಕನಸನ್ನು ಕುರಿತು ಬರೆದ ಭಾವಗೀತ' ಎಂದಿದ್ದಾರೆ.

ಬೇಂದ್ರೆಯವರು ಈ ಕವನದ ಪ್ರಾರಂಭದಲ್ಲಿ 'ನನ್ನ ನಿನ್ನ ಬೆನ್ನ ಬಳಿ ವಿಶಾಲ ವೃಕ್ಷ ಬೆಳೆದಿದೆ' ಎಂದು ಹೇಳಿರುವ ನುಡಿಯ ವೃಕ್ಷ ಭಾರತೀಯ ಅಧ್ಯಾತ್ಮ ಚಿಂತನೆಯ, ಶ್ರೀಯೋಗಿ ಅರವಿಂದ ಆಲೋಚನೆಯ ಅಧ್ಯಾತ್ಮ ವೃಕ್ಷ. ಅದು ಪೂರ್ಣವಾಗಿ ವ್ಯಾಪಿಸಿಕೊಂಡು ತಮ್ಮ ಜೀವದುಸಿರಾಗಿದೆ ಎಂಬುದನ್ನು 'ಮುಗಿಲತುಂಬಿ ಉಳಿದಿದೆ। ಗಾಳಿಯಂತೆ ಸುಳಿದಿದೆ' ಎಂದಿದ್ದಾರೆ. ಆದರೆ ಅವರಿಬ್ಬರೂ ಹಿಡಿದಮಾರ್ಗ, ದೃಷ್ಟಿಪಥ ಬೇರೆಯಾಗಿದೆ. ಬೆನ್ನು ಹತ್ತಿದಂತೆ ಒಬ್ಬರಿಗೊಬ್ಬರು ಇರುವುದು ಸಂವಾದ ಸಾಧ್ಯವಾಗದ ಸ್ಥಿತಿಯಾಗಿದೆ. ಅದು ಸ್ವತಂತ್ರ ವಿಚಾರಶೀಲರಾಗಲು ಸಾಧ್ಯವಾದ ಮನೋಭಾವವೂ ಆಗಿ ಚಿತ್ರಿತವಾಗಿದೆ. ಬೇಂದ್ರೆಯವರದು ಅಧ್ಯಯನ ನಿಷ್ಠೆಯ ಜ್ಞಾನಮಾರ್ಗವಾದರೆ, 'ಮಧುರಚೆನ್ನ'ರದು ಯೋಗ ನಿಷ್ಠೆಯ ಸಾಧನಾಮಾರ್ಗವಾಗಿತ್ತು.

ಅವರಿಬ್ಬರು ಗೆಳೆಯರಾಗಿದ್ದು ಪರಸ್ಪರರನ್ನು ಚೆನ್ನಾಗಿ ತಿಳಿದಿದ್ದರೂ; ಅವರ ದೃಷ್ಟಿಕೋನಗಳು, ಆಲೋಚನಾಲಹರಿಗಳು ಬೇರೆ ಬೇರೆಯಾಗಿದ್ದವು. ಅವರಿಬ್ಬರೂ ಪ್ರತ್ಯೇಕ ವ್ಯಕ್ತಿಗಳಾಗಿರುವುದರಿಂದ ಭಿನ್ನಾಭಿಪ್ರಾಯ ಅತಿಸಹಜ. ಆ ಭಿನ್ನತೆ ಅರಿತು ಅವರವರ ನಿಲುವನ್ನು ಗೌರವಿಸಿ ನಡೆಯುವುದು ಸ್ನೇಹದ ಪರಿಪಾಕ ಮನಸ್ಥಿತಿ. ಅವರಿಬ್ಬರ ಮನದ ಅಂತರಾಳದ ಭಾವ ಒಂದೇ ಆಗಿ ಆ ನೇಹದ ತೊರೆ ಬತ್ತದಂತಿದೆ. ಅದು ಅವರಿಬ್ಬರ ಅರಿವಿನ ಎಚ್ಚರ.

'ಕೈಗೆ ಕೈಯು ಹತ್ತಿರಿದ್ದು, ಮೈಗೆ ಮೈಯು ಹತ್ತದು
ಕಣ್ಣುಕಣ್ಗೆ ಮುತ್ತದು
ಎವೆಗಳನ್ನು ಎತ್ತದು.
ಮನದ ಮಾತು ಮಾತ್ರ, ಮನದವರೆಗೆ ಬರದೆ ಬತ್ತದು
ಸುಳ್ಳು ಹಾದಿಸುತ್ತದು.'

ಯೋಗ ಮಾರ್ಗಿಯಾದವನಿಗೆ ದೇಹವೊಂದು ಉಪಕರಣಸಾಧನ. ಅವನು ದೇಹದ ಮಿತಿ ಅರಿತು ಅದರ ಮೋಹವನ್ನು ಕ್ರಮ ಕ್ರಮವಾಗಿ ತ್ಯಜಿಸುತ್ತ, ಆತ್ಮದ ಅರಿವಿನತ್ತ ಸಾಗುತ್ತಾನೆ. ಪ್ರಾಣಶಕ್ತಿಯ ನಿರೋಧದಿಂದ ಮತ್ತು ಮನಸ್ಸಿನ ಏಕಾಗ್ರತೆಯಿಂದ ಸೂಕ್ಷ್ಮದೃಷ್ಟಿ ಪಡೆಯುತ್ತಾನೆ. ಸಾಧನಾ ಪಥದಲ್ಲಿ ಮುಂದುವರೆಯುತ್ತ ಸೂಕ್ಷ್ಮ ದೃಷ್ಟಿಯೇ ದಿವ್ಯದೃಷ್ಟಿಯಾಗುತ್ತದೆ. ಆ ನೆಲೆಗೆ ಸಾಗುವ ಸಾಧಕನಾಗುವುದು ಈ ಒಂದು ಜನ್ಮದ ಫಲವಲ್ಲ. ಅದು ಜನ್ಮಾಂತರದ 'ರಾಗ ವಿರಾಗವಾಗಿರುವುದು' ವಿರಾಗಿಯ ಹಂತ ತಲುಪಿದ ಮಧುರಚೆನ್ನರ ಜೀವನದ ಕಾಯಿ 'ಪಾಡು' ಆಗಿದೆ. ಅಂದರೆ ದೋರ ಮಾವಿನ ಹಣ್ಣಿನ ಅನಂತರ ಈ ಕಾಯ ಯೋಗಸಾಧನೆಯಲ್ಲಿದೆ. ಅಡೆಹಾಕುವ ಸ್ಥಿತಿ ತಲುಪಿದೆ. 'ಪಾಡು' ಆಗಿದೆ, ಮಾಗುತ್ತಿದೆ. ಅವರ ಬಾಳು ಯೋಗಸಾಧನಾ ಫಲದ ಭಾರದಿಂದ ಬಾಳೆಗೊನೆಯಂತೆ ಬಾಗಿದೆ. ಆ ಜೀವಕ್ಕೆ ದಿವ್ಯದೃಷ್ಟಿ ಕಂಡಿದೆ. ಹಾಗಾಗಿ ಅದು ಮುಂದೆ ಮುಂದೆಸಾಗುತ್ತ ಅದರಲ್ಲಿ ಲೀನವಾಗಿದೆ ಎಂದಿದ್ದಾರೆ ಬೇಂದ್ರೆಯವರು. ಯೌಗಿಕಸಾಧನಾ ಮಾರ್ಗದಲ್ಲಿ ಯಶಸ್ವಿಯಾದ ಮಧುರಚೆನ್ನರ ಆ ಅನುಭವವನ್ನು ಬೇಂದ್ರೆಯವರು ಮೂರನೇ ಹಾಗೂ ನಾಲ್ಕನೇ ನುಡಿಯಲ್ಲಿ ಕಾವ್ಯನುಭವವಾಗಿಸಿದ್ದಾರೆ.

ಕುಳಿತ ಹಾಗೆ ದೇಹವನ್ನು ಬೀಳಲುಗಳು ಬಿಗಿದಿವೆ
ಮೈಯಕೆಲಸ ಮುಗಿದಿವೆ.
ಚಿತ್ತದೂಟೆ ನೆಗೆದಿವೆ;
ಜೀವದಾಳದಲ್ಲಿ ಮಡಗಿದಂಥ ಮುತ್ತನೊಗೆದಿವೆ.
ಮೇಲುಹಾದಿ ಬೆಳಗಿವೆ.

ಯಾವ ಜನುಮದೊಂದು ರಾಗ ಈ ವಿರಾಗವಾಗಿದೆ?
ಬಾಳಗೊನೆಯು ಬಾಗಿದೆ
ಕಾಯಿ ಪಾಡು ಮಾಗಿದೆ.
ಜೀವದೋಟ ನೋಟವಾಗಿ ಮುಂದೆ ಮುಂದೆ ಸಾಗಿದೆ
ಎಲ್ಲೊ ಲೀನವಾಗಿದೆ.

## ೧೧. ವಿಡಂಬನ ಕವಿತೆ : ಅವರ್ಣನೀಯ ಅರ್ವಾಚೀನ ಸೌಂದರ್ಯ

ಬೇಂದ್ರೆಯವರು 'ಅವರ್ಣನೀಯ ಅರ್ವಾಚೀನ ಸೌಂದರ್ಯ' ಕವನವನ್ನು ವಿಡಂಬನಾತ್ಮಕವಾಗಿ ರಚಿಸಿದ್ದಾರೆ. ಆಧುನಿಕ ಮಹಿಳೆಯ ಕೃತಕ ಸೌಂದರ್ಯವನ್ನು ವರ್ಣಿಸಲು ಸಾಧ್ಯವಾಗದು ಎಂದು ಅವರು ಬಳಸಿರುವ ಭಾಷೆ ಗಾಂಭೀರ್ಯದಿಂದ ಕೂಡಿದೆ. ಹಾಗಾಗಿ ಅದು ವ್ಯಂಜಿಸುವ ವ್ಯಂಗ್ಯ ಸಂವಹನಗೊಳ್ಳದೆ ಸೋತಿದೆ. ಈ ಕವನದ ಮೊದಲಮೂರು ನುಡಿಗಳು ಅವಳ ದೈಹಿಕ ಅಂಗಾಂಗಗಳ ವಕ್ರತೆಯನ್ನು ಮರೆಮಾಚಿದ ಉಪಕರಣಗಳಿಂದ ವಿಡಂಬಿಸಿದೆ. ಅದು ಸೌಂದರ್ಯವನ್ನು ವರ್ಣಿಸದೆ ಕುಂದಾಗಿಸಿರುವುದು ನೋಡುವವರಿಗೆ ತಮಾಷೆಯನೋಟ. ಆದರೆ ಆ ಉಪಕರಣಗಳ ಮೊರೆ ಹೋದವರಿಗೆ ಅದು ತಮ್ಮನ್ನು ಹೆಚ್ಚು ಸುಂದರವಾಗಿಸಿದೆ ಎಂಬ ಕುರುಡುಭಾವ. ಈ ದ್ವಂದ್ವದ ಅನಾವರಣವೇ ವ್ಯಂಗ್ಯ.

ಒಟ್ಟು ಸೌಂದರ್ಯದ ಬಿಂಬ ಮುಖ. ಅದರ ಹೊಳಪುಕಣ್ಣು. ಅದನ್ನು ಮರೆಮಾಚಿದಾಗ ಏನೋಐಬಿದೆ ಎಂಬುದು ಸ್ಪಷ್ಟ. ಕೂದಲು ಕರ‍್ರಗೆ ಕಾಣುವಂತೆ ಕಲಪನ್ನು ಹಚ್ಚಿಕೊಂಡರೆ ಮುಖಕ್ಕೆ ಕರಿಕೂದಲಿನ ಹೊಳಪು ಸಾಧ್ಯವಿಲ್ಲ ಎಂದು ಮೊದಲನುಡಿ ಚಿತ್ರಿಸಿದೆ.

'ಕುರುಡಿರಲಿ ಮೆಳ್ಳಿರಲಿ ಕಪ್ಪು ಕನ್ನಡಕವಿರೆ  
ನಯನಗಳೇನು ಬಣ್ಣಿಸಲಿ ಮಣ್ಣು?  
ಏನುತಲೆ ಬಣ್ಣಿಸಲಿ ತಿಗಳಿ ಮೇಯುವ ಹೊಲವ?  
ಕಲಪನ್ನು ಕಾಣವೇ ನನ್ನ ಕಣ್ಣು?'

ಎರಡನೆ ಹಾಗೂ ಮೂರನೇ ನುಡಿಯಲ್ಲಿ ಹಲ್ಲು, ಮುಖದ ಸಾರಣೆಕಾರಣೆಯ ವಕ್ರ ಅಲಂಕಾರ ಬಣ್ಣಿಸಿ 'ಮೊಚ್ಚೆ, ಮುಚ್ಚಿರಲಾಗಿ, ಅಡಿಯಡಿಯ ಬಣ್ಣನೆಯು । ರವಿಯಿರಲಿ ಕವಿಯಿರಲಿ – ಸಾಧ್ಯವೇನು?' ಎಂದು ಪ್ರಶ್ನಿಸಿದ್ದಾರೆ.

ಕೊನೆಯ ನಾಲ್ಕನೆಯ ನುಡಿಯಲ್ಲಿ ಆಧುನಿಕ ಮಹಿಳೆಯ ವ್ಯಂಗ್ಯವನ್ನು ವ್ಯಂಗ್ಯಕಾವ್ಯಕ್ಕೆ ಹೋಲಿಸಿದ್ದಾರೆ.

'ಅಂಗಾಂಗ ವ್ಯಂಗ್ಯವಿರಬಹುದು ಇರದಿರಬಹುದು;  
ವ್ಯಂಗ್ಯಕಾವ್ಯದ ಹಾಗೆ ನಿನ್ನಮಾಟ  
ನಿನ್ನ ಮೈಯನ್ನೆಲ್ಲ ನೀನೆ ಬಣ್ಣಿಸಿಕೊಂಡೆ  
ಬೇರೆಬಣ್ಣನೆ ಬರಿಯಬಣ್ಣದಾಟ.'

## ೧೨. ನಾಡುನುಡಿ ಚಿಂತನೆ : ಕನ್ನಡದ ಕಂದವ್ವನಲಾಲಿ

ಬೇಂದ್ರೆಯವರು ನಾಡುನುಡಿಯ ಅಭಿಮಾನದಿಂದ 'ಕನ್ನಡದ ಕಂದವ್ವನಲಾಲಿ' (ರಚನೆ : ೧೯೧೯) ಕವನವನ್ನು ರಚಿಸಿದ್ದಾರೆ. ಅವರ ಕಾವ್ಯರಚನಾ ಪ್ರಾರಂಭದ ಕವನ ಇದಾಗಿದ್ದು ಭಾರತಾಂಬೆಯ ಮಗಳು ಕನ್ನಡತಾಯಿ. ಅವಳನ್ನು ಪೂರ್ವ ಪಶ್ಚಿಮ ಘಟ್ಟಗಳ ನಡುವೆ ತೊಟ್ಟಿಲನ್ನು ಕಟ್ಟಿ ಭಾರತಮಾತೆ ತೂಗುತ್ತಿದ್ದಾಳೆ ಎಂದು ಅಪೂರ್ವ ಕಲ್ಪನೆ ನೀಡಿದ್ದಾರೆ. ಕನ್ನಡದ ಕಂದವ್ವ, ಭಾರತಮಾತೆಗೆ 'ಹುಚ್ಚು ಹಿಡಿಸುವ, ಕಣ್ಣಮುಚ್ಚಿದರೆ ನಗೆಯುಳ್ಳ, ನನ್ನ ಎದೆಮುಗುಳೆ' ಆಗಿದ್ದಾಳೆ.

ಜೋಗುಳದರೀತಿ ಭಾರತಾಂಬೆ ತನ್ನ ಮಗಳು ಕನ್ನಡದ ಕಂದಮ್ಮನನ್ನು ತೂಗಿ ಹಾಡುವಂತೆ ಕವನವಿದೆ. ಇದು ಜೋಗುಳದ ಹಾಡು. ಬೇಂದ್ರೆಯವರಿಗೆ ಕನ್ನಡಮಾತೆ ಎಂದರೆ ಬೆಳಕು, ಜ್ಞಾನದ ತವನಿಧಿ. ಹಾಗಾಗಿ ಆಕೆ 'ಹಗಲು ನಸುಕಿನ ಬಸುರಿನಿಂದ ಮೂಡುವ ತೆರದಿ' ಕಂಗೊಳಿಸಿದ್ದಾಳೆ. ಭಾರತಾಂಬೆಗೆ 'ತಾಯಿ' ಹೆಸರಿನ ಕೀರ್ತಿ ತಂದ ಭಾವಲಹರಿಯಲ್ಲಿ ಬೇಂದ್ರೆಯವರ ಐದು ಐದೆಯರ ಕಲ್ಪನೆಯ ಚಿಂತನೆರೂಪುಗೊಂಡ ಹೊಳಹು ಇದೆ. ಭಾರತಾಂಬೆ 'ಆತ್ಮ-ತನುಜಾತೆ'ಯನ್ನು ತೂಗಿ ಜೋಗುಳ ಹಾಡುವಾಗ ಕನ್ನಡಾಂಬೆ 'ಅಂಬಿಕಾತನಯದತ್ತನ ತೊದಲು ಮಾತೆ'ಯಾಗಿದ್ದಾಳೆ.

ಬೇಂದ್ರೆಯವರು ಈ ಜೋಗುಳ ಕೇಳಿದ ಜನರು - ಭಾರತಾಂಬೆ ಹಾಗು ಕನ್ನಡಮಾತೆ ಇಬ್ಬರನ್ನು ಕಂಗೊಳಿಸುವಂತೆಮಾಡಿ - ಎಂದು ಪ್ರಾರ್ಥಿಸಿದ್ದಾರೆ.

# ೧೩. ಬನ್ನಿಬನ್ನಿ ಕನಸುಗಳೇ

ಬೇಂದ್ರೆಯವರು ಈ ಹಾಡನ್ನು ಅಲಿಖಿತ ನಾಟಕದೊಳಗಿನದು ಎಂದು ಭಾವಸಂದರ್ಭದಲ್ಲಿ ತಿಳಿಸಿದ್ದಾರೆ. ಈ ಹಾಡಿನಲ್ಲಿ ಒಬ್ಬವೀರ ವಿರಕ್ತ ತನ್ನ ಇಳಿವಯಸ್ಸಿನಲ್ಲಿ ತನ್ನ ಜೀವನವನ್ನು ಸಿಂಹಾವಲೋಕನಕ್ಕೆ ಒಳಪಡಿಸಿದ್ದಾನೆ. ಬೇಂದ್ರೆಯವರಿಗೆ ಕನಸುಗಳೆಂದರೆ ಪ್ರಿಯವೂ, ಬೋಧಪ್ರದವೂ ಆಗಿದೆ. ಅವರು ಸ್ವಂತ ಕನಸುಗಳಿಂದ ವಂಚಿತರಾದಾಗ ತಮ್ಮ ಅಲಿಖಿತ ನಾಟಕದ ನಾಯಕನಿಗೆ ಕನಸುಗಳನ್ನುಣಿಸಿದ್ದಾರೆ. ಅವನ ಕನಸನ್ನು ಹಾಡಿ ತಾವು ನಿರಾಳರಾಗಿದ್ದಾರೆ.

ಕವನದ ನಾಯಕ ವೀರವಿರಕ್ತ 'ಬನ್ನಿ ಬನ್ನಿ ಕನಸುಗಳೇ। ಮರಳಿ ಮನೆಗೆ ಬನ್ನಿ!' ಎಂದು ಪಲ್ಲವಿ ಹಾಡಿ ತನ್ನ ಕಳೆದುಹೋದ ದಿನಗಳನ್ನು ಕನಸೆಂದು ಕರೆದು, ತನಗೆ ಉಲ್ಲಾಸ ನೀಡಲು ಅವುಗಳನ್ನು ಮತ್ತೆ ಮನೋಲೋಕಕ್ಕೆ ಆಹ್ವಾನಿಸಿದ್ದಾನೆ. ಅವನ ಹಸುಳೆತನದ ನಸುನಗೆ ಕಣ್ಣುಚಿವುಟಿ ಕಳೆದು ಹೋದುದಕ್ಕೆ ವ್ಯಥೆಪಟ್ಟಿದ್ದಾನೆ. ತಾನು ಬಾಲ್ಯದಲ್ಲಿ ಕೇಳಿದ ಮಾತನಾಡುವ ಗಿಣಿ, ಸಾಹಸದ ರಾಜಕುಮಾರರು, ಉತ್ತಮವಾಗಿ ಬಾಳಿಬದುಕಿದವರ ಕಥೆಯೆಲ್ಲಾ ಮುಚ್ಚಿಕೊಂಡ ಕನಸಾಗಿದೆ. ಅದರ ತೆರೆಸರಿಸಿ ಒಳಹೋಗುವುದರಲ್ಲಿ ಅವನ ಬಾಲ್ಯದ ಹುಡುಕಾಟವಿದೆ. ಅದು ಆ ವಿರಕ್ತನಿಗೆ ನೆಮ್ಮದಿ ತಂದಿದೆ.

ಅವನಿಗೆ ಹುಡುಗಾಟದಲ್ಲಿ ಕಳೆದ ದಿನವೆಂದರೆ 'ಬೆಡಗಿನ ಗೆಳೆಮಾಟ'. ಸ್ವತಂತ್ರವಾಗಿ ಸ್ವಚ್ಛಂದದಿಂದ ತುಂಬಿ ಚಿಟ್ಟೆಗಳಂತೆ ಗೆಳೆಯರೊಡನೆ ಹರಟುತ್ತ ಕಳೆದ ಮಾಟ.

'ಹುಡುಗರ ಹುಡುಗಾಟದಲ್ಲಿ
ಬೆಡಗಿನ ಗೆಳೆಮಾಟದಲ್ಲಿ
ಬೆಳೆಸಿದ ಕೈತೋಟದಲ್ಲಿ
ಕೆಲೆದ ತುಂಬಿ ಚಿಟ್ಟೆಯಂಥ
ಕನಸುಗಳೇ ಬನ್ನಿ.'

ಅಂದಿನ ಉತ್ಸಾಹ, ಉಲ್ಲಾಸದ ನೆನಪು 'ಮೀರಿದ ಬೆಳದಿಂಗಳು' ಆಗಿ ಹರಿದಿದೆ. ಆ ಯೌವನ ನೆನೆಯುವುದೇ ತೆರೆಮರೆ ಆಟದಂತಿದೆ. ಆ ಕಾಲವನ್ನು ಹಕ್ಕಿ, ಜಿಂಕೆ ಪ್ರತಿಮೆಗಳಲ್ಲಿ ಸೊಂಪಾಗಿಸಿದ್ದಾರೆ. ಎದೆಯ ಮುದವನ್ನು ಸವಿದ ಅದನ್ನು ಬಣ್ಣಿಸಲಾಗದು, ಹಾಗೂ ವರ್ಣಿಸಿದರೆ ಅತಿವಾಚ್ಯವಾಗಿ ವ್ಯಂಗ್ಯಕಚಗುಳಿ ತಪ್ಪಿಹೋದೀತು.

'ಹರೆಯದ ತೆರೆ ತೆರೆಗಳಲ್ಲಿ
ಅರೆತೆರೆದಿಹ ಮರೆಗಳಲ್ಲಿ

ಎದೆಯ ಮುದದ ತೊರೆಗಳಲ್ಲಿ
ಸುಧೆಯ ಕುಡಿದ ಹಕ್ಕಿ ಜಿಂಕೆ
ಕನಸುಗಳೇ ಬನ್ನಿ.'

ಆ ಕನಸೆಂಬುವುದು ಕುಡಿಯೊಡೆದ ಬಳ್ಳಿಯಂತೆ ಮನಸ್ಸನ್ನು ವ್ಯಾಪಿಸಿದ ಬಲ. ಚಿಂತೆಯನ್ನು ತೊರೆಯಿಸಿದ ಒಲವು. ನಿಶ್ಶಬ್ದವಾಗಿ ಪ್ರೀತಿಸಿದ ಚೆಲುವು. ಮುಪ್ಪಿನ ದೇಹದಲ್ಲಿ ಉಲ್ಲಾಸದ ಬುಗ್ಗೆಯಾಗಿ ಚಿಂತನೆಗೆ ಪೋಷಕದ್ರವ್ಯವಾದ ಕನಸುಗಳು ವೀರ ವಿರಾಗಿಗೆ ಅತಿ ಅವಶ್ಯಕವಾಗಿವೆ. ಹಾಗಾಗಿ ಆ ಕನಸುಗಳನ್ನು ಆಹ್ವಾನಿಸುತ್ತ ನುಡಿದಿದ್ದಾನೆ.

'ಹಾರೈಸಿದ ಬಿಡುಗಡೆ
ವಿರಾಟದ ನಿಲುಕಡೆ
ಮಿಂಚಿಹೋದ ಕನಸುಗಳೇ
ಹೊಂಚು ದಾಟಿ ಬನ್ನಿ.'

# ೧೪. ಕವನ

ಬೇಂದ್ರೆಯವರು ಕವನದ ಹುಟ್ಟನ್ನು ಕುರಿತು ಹಲವಾರು ಕವನಗಳನ್ನು ರಚಿಸಿದ್ದಾರೆ. ಅವರಿಗೆ ಕವನವೆಂದರೆ ಒಂದು ಮಗು ಸಲಕ್ಷಣವಾಗಿ ರೂಪುಗೊಂಡು ತಾಯಿಯ ಒಡಲಿನಿಂದ ಹೊರಬಂದಂತೆ. ಅದು ಅವರಿಗೆ 'ಅರ್ಥದ ಶಬ್ದದ ಸಂಧಿಯ ಸದ್ಭಾವದ ಹೆರಿಗೆ.' ಅವರ 'ಭಾವಗೀತೆ' ಕವಿಯ ಭಾವವು ನಾದ, ಲಯ, ಸ್ವಾತಂತ್ರ್ಯ, ಪ್ರೇಮದಲ್ಲಿ 'ಗೀತೆ'ಯಾಗುವ ಸಂಕೀರ್ಣಾನುಭವದ ಶ್ರೇಷ್ಠ ಕಾವ್ಯ. ಆ ಮಟ್ಟದ ಕಾವ್ಯರಚನಾ ಚಿಂತನ ನೆಲೆಗೆ ಸಾಗುವ ಪೂರ್ವದ್ದು ಈ 'ಕವನ'.

'ಕವನ'ವನ್ನು ಕುರಿತು ಈ ಪದ್ಯದಲ್ಲಿ ನಾಲ್ಕು ನುಡಿಗಳಿವೆ. ಮೊದಲ ನುಡಿ ಕವನ ರೂಪುಪಡೆದ ರೀತಿಯನ್ನು; ಎರಡನೆಯನುಡಿ ಅದರ ಪರಿಣಾಮವನ್ನು; ಮೂರನೆಯನುಡಿ ಅದರ ದೃಷ್ಟಿಯನ್ನು; ನಾಲ್ಕನೆಯನುಡಿ ಅದರ ವ್ಯಾಪ್ತಿಯನ್ನು ತಿಳಿಸಿದೆ.

ಮೊದಲ ನುಡಿಯಲ್ಲಿ ಕವಿಯ ಪ್ರಾಣವಾಯುವಾದಂತಹ ಗಾಳಿಯ ಪ್ರತಿಮೆಯಲ್ಲಿ ಕವನ ತುಸು ಕಣ್ಬಿಟ್ಟಿದೆ. ಅದು ಅವನ ಹೃದಯವನ್ನು ತಟ್ಟಿ ಆಗಸದಷ್ಟು ವಿಶಾಲವಾಗಿ ವ್ಯಾಪಿಸಿದೆ. ಅದಕ್ಕೆ ಕವಿಯ ಕಣ್ಣು ಬಣ್ಣವನ್ನಿಟ್ಟು, ಉಸಿರನಡಿಗೆ ಅಂದರೆ ನಾದ, ಶಬ್ದವನ್ನು ಕೊಟ್ಟಿದೆ. ಆಗ ಅದು ಕವನವಾಗಿದೆ.

'ನೆವಕೆ ನುಡಿಯನುಟ್ಟಿತು
ಕವನ–ವೇಷವ ತೊಟ್ಟಿತು.'

ಎರಡನೆಯನುಡಿ ಕವನದ ಪರಿಣಾಮವನ್ನು ತಿಳಿಸಿದೆ. ಅದು ಜಗದ ಜಂಜಡದ ವಿಶ್ವವ್ಯಾಪಿ ವ್ಯವಹಾರದಲ್ಲಿ 'ಕಿರಿನುಡಿ'ಯಾಗಿದೆ. ಆದರೆ ಅದು ಕಲ್ಲೆದೆಯ ಹೃದಯದಲ್ಲೂ ನಾಟುವ ಶಕ್ತಿಹೊಂದಿದೆ. ಕ್ಷುಲ್ಲಕ ಪಿಸುಣತನವನ್ನು ಸುಟ್ಟಿದೆ. ಹುಸಿಯನ್ನು ಕುಟ್ಟಿ ಪುಡಿಮಾಡಿದೆ. ದುಗುಡಗಳನ್ನು ಓಡಿಸಿದೆ. ದುರಹಂಕಾರಿಗಳ 'ಮಲೆತವರ ತಲೆ ಮೆಟ್ಟಿದೆ'

ಮೂರನೆಯ ನುಡಿಯಲ್ಲಿ ಕವನದ ದೃಷ್ಟಿಯನ್ನು ವರ್ಣಿಸಿದೆ. ಅದು ವಿಶಾಲ ದೃಷ್ಟಿಯನ್ನು ಹೊಂದಿ ಕರುಳಕರೆಗೆ ಓಗೊಡುವ ಅಂತರಾಳದ ಮಿಡಿತದಿಂದಿದೆ. ತಾನು ನಕ್ಕು ಸಹೃದಯರನ್ನು ನಗಿಸುವ ಗುಣದಿಂದ ಹೂಬಿಟ್ಟ ಚೆಲುವಿನಲ್ಲಿ ನಿದ್ರಿಸಿದೆ.

'ಪೂತ ಚೆಲುವಲಿ ಪಟ್ಟಿತು
ಒಲವಿನೊಲವನು ಒಟ್ಟಿತು।
ಜೇನು ಹುಟ್ಟಿಯ ಕಟ್ಟಿತೋ
ಹಾಡು ಹುಟ್ಟಿತೊ ಹುಟ್ಟಿತು.'

ನಾಲ್ಕನೆಯನುಡಿ ಕಾವ್ಯದ ವಿಶಾಲ ನೆಲೆಯನ್ನು ಚಿಂತಿಸಿದೆ. ಅದು ಹಾಡಿನ ಅಲೆಯಲ್ಲಿ ಅಲೆಯುತ್ತ ಗಗನಕ್ಕೇರಿ ಮುಗಿಲಿನ ತನ್ನ ಸಂಬಂಧಿ ಚಿಕ್ಕೆಗಳೊಡನೆ ಸೇರಿದೆ. ಋತುಗಳ ರಾಜ್ಯದಲ್ಲಿ ನಲಿದು ಸೂರ್ಯ ಚಂದ್ರರನ್ನು ಒಲಿದಿದೆ. ಕವನ ಹೃದಯದ ಭಾಷೆಯೆಂದು ಮೊದಲ ನುಡಿಯೇ ತಿಳಿಸಿದೆ. ಹಾಗಾಗಿ ಅದು ಹೃದಯಸ್ಪಂದನ ಗುಣದಿಂದ ಜೀವ ಜೀವಗಳನ್ನು ಬೆಸೆದಿದೆ. ಜಡಚೈತನ್ಯಗಳಲ್ಲಿ ಹೊಸ ಹುರುಪನ್ನು ತಂದು ಜಗತ್ತನ್ನೆಲ್ಲಾ ವ್ಯಾಪಿಸಿದೆ.

'ಭೂತವೂ ಜಡಜಾತವೂ
ಇದರೊಳೋತ ಪ್ರೋತವೂ॥'

**

# ಭಾವಗೀತೆ

ದ.ರಾ.ಬೇಂದ್ರೆಯವರು ಮುಗದ ಗ್ರಾಮದಲ್ಲಿ ಇರುವ ಸಮಯದಲ್ಲಿ (೧೯೩೨-೩೩) ವೇದನೆಗೆ ಒಳಗಾಗಿ ದುಗುಡದಿಂದಿದ್ದರು. ಅವರು ಕಟ್ಟಿದ್ದ 'ಗೆಳೆಯರ ಗುಂಪು' ವಿಘಟನೆಯಾಗಿತ್ತು. ಬ್ರಿಟೀಷ್ ಸಾಮ್ರಾಜ್ಯವನ್ನು ಎದುರಿಸಿ ಜೇಲುವಾಸ ಅನುಭವಿಸಿ, ಸ್ಥಾನಬದ್ಧತೆಗೆ ಒಳಗಾಗಲು ಕಾರಣವಾದ ತಮ್ಮ ಕವಿತಾಶಕ್ತಿಯ ಬಗ್ಗೆ ಅವರಿಗೆ ಹೆಮ್ಮೆಯುಂಟಾಗಿತ್ತು. 'ನರಬಲಿ' ಕವನವು ಬಲಿಮಾಡಿತೆನ್ನನು/ಹೆಳವನಿದ್ದಲ್ಲಿಗೆ ಹೊಳೆಬಂದಿತು' ಎಂಬ ಹಿರಿಮೆ ಅವರದಾಗಿತ್ತು. ವಿರುದ್ಧ ಭಾವಗಳ ತಾಕಲಾಟದ ಸಂಘರ್ಷದಲ್ಲಿ ಋಣಾತ್ಮಕ ಸಂಗತಿ ಸಂದರ್ಭಗಳ ನೆನಪು ಮನಸ್ಸಿನ ಭಾರವನ್ನು ಹೆಚ್ಚಿಸಿದಂತೆ, ಧನಾತ್ಮಕ ಆಲೋಚನೆ ಕಾವ್ಯ ಕೃಷಿ ನೀಡುವ ಮಧುರ ಆನಂದ ಆಹ್ಲಾದದಿಂದ ಅವರ ಮನಸ್ಸು ಮತ್ತು ದೇಹ ಹಗುರಾಗುತ್ತಿದ್ದವು.

ನಿರಾಸೆ, ಆತಂಕ, ಅನಿಶ್ಚಯತೆಗಳ ಬಸುರಿನಿಂದಲೇ ಸ್ಥಿರ ಚಿಂತನೆಯ ಕಾವ್ಯ ಹುಟ್ಟಿಬರುತ್ತಿತ್ತು. ಮನಸ್ಸು ಆಗತಾನೆ ಬಿರಿದ ಮಲ್ಲಿಗೆಯಂತೆ ತಾಜಾ ಕಂಪು ಸೂಸಿ ಉಲ್ಲಾಸವಾಗಿರುತ್ತಿತ್ತು. ಆ ಆಹ್ಲಾದವೇ 'ಭಾವಗೀತ' ವಾಗಿ ಸಹೃದಯರ ಉಲ್ಲಾಸ, ಕ್ರಿಯಾಶೀಲತೆಗೆ ಕಾರಣವಾಗುತ್ತಿದೆ ಎಂದು ತಿಳಿದ ಕವಿಬೇಂದ್ರೆ-ಆ ಎಲ್ಲ ಭಾವಕ್ಕೆ ಪ್ರತಿಮೆಯಾಗಿ 'ಭೃಂಗ' ವನ್ನು ಕಂಡು 'ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸ' ಎಂಬ 'ಭಾವಗೀತ' ರಚಿಸಿದರು.

'ಭೃಂಗ' ವು ಹೂವಿನ ಮಕರಂದ ಸಂಗ್ರಹದಿಂದ ಅದನ್ನು ಮಧುವಾಗಿಸು ವವರೆಗಿನ ಒಂದು ಪೂರ್ಣಕ್ರಿಯೆ ಅವರಿಗೆ 'ಭಾವಗೀತ' ಸೃಷ್ಟಿಯ ರೂಪಕವಾಗಿ ಕಂಡಿತು. ಕವಿಯ 'ಭಾವಗೀತ' ತುಂಬಿಯಂತೆ ಸಹೃದಯನನ್ನು ಹೊಕ್ಕು ಅವನನ್ನು ಮಧುರ ಭಾವನೆಗೆ ಒಳಗಾಗಿಸಿ ಮಧುವಾಗಿಸುವ ಲೀಲೆಯೆನಿಸಿತು. ಆ ಲೀಲೆಯಲ್ಲಿ ರಸಿಕ ಸಹೃದಯ ತುಂಬಿಯಂತೆ ನಲಿದು ಲಯಾನ್ವಿತ ನರ್ತನ ನಡಿಗೆಯಲ್ಲಿ ನಾದಕ್ಕೆ ತಕ್ಕಂತೆ ಓಲಾಡಿ ತಣಿವುದೇ ಆಹ್ಲಾದ, ಕಾವ್ಯದ ಸಾರ್ಥಕತೆ ಎನಿಸಿತು.

****

ಬೇಂದ್ರೆಯವರ 'ಭಾವಗೀತ'ದ ಕಲ್ಪನಾ ವಿಲಾಸವು ಮಕ್ಕಳನ್ನು ನಲಿಸುವ 'ಹಾರಗುದುರಿ ಬೆನ್ನ ಏರಿ' ಬಂದಿಲ್ಲ. ಆನೆಯ ಅಂಬಾರಿಯ ಮೇಲೆ ಕುಳಿತು ವಿಜೃಂಭಿಸಿಲ್ಲ. 'ಮಾತಾನಾಡುವ ಗಿಣಿ', 'ಸುಧೆಯ ಕುಡಿದ ಹಕ್ಕಿ' ಅಥವಾ ಗಾಳಿ, ಮೋಡಗಳ ಸವಾರಿ ಮಾಡುತ್ತಲೂ ಬಂದಿಲ್ಲ. ಅದು ಬಂದಿರುವುದು 'ಭೃಂಗದ ಬೆನ್ನೇರಿ'. ಅದು ಜೀವನಾನುಭವ ಸಂಸ್ಕಾರಗೊಂಡು ಮಧುವಾದುದರ ಪ್ರತೀಕ.

ಕನ್ನಡದ 'ತುಂಬಿ'ಯೇ 'ಭೃಂಗ'. 'ತುಂಬಿ' ಬೇಂದ್ರೆಯವರಿಗೆ ತುಂಬಾ ಪ್ರಿಯವಾದ ಪದ. ಅವರು 'ಈ ತುಂಬಿ ಬಾಳು ತುಂಬಿರುವ ತನಕ ತುಂತುಂಬಿ ಕುಡಿಯಬೇಕು' ಎಂಬ ಚಿಂತನೆಯನ್ನು ನೀಡಿ ತುಂಬಿಬಾಳಿನ ಸವಿಯನ್ನು ಈ ನೆಲದ ಜನ ಅನುಭವಿಸುವಂತೆ ತಿಳಿ ಹೇಳಿದ್ದಾರೆ.

ಬೇಂದ್ರೆಯವರ ಭಾವಭೃಂಗ ರೆಕ್ಕೆ ಕಟ್ಟಿಕೊಂಡು ಹಾಡುವುದು 'ಜೇಂಗೊಡ'ಕ್ಕೆ.

'ಹಾರಿದೆನು ಜೇಂಗೊಡಕ್ಕೆ. ಹೀರಿದೆನು ಬಾಯಹಚ್ಚಿ
ತೀರಿದರು ತಣಿವಿಲ್ಲ ಮೈಮರೆಯೆ ಕುಡಿದೂ ಮನ
ದಣಿಯಲಿಲ್ಲ ಕಡೆಗೂ'
(ಸಖೀಗೀತ–ಜೇನುಹುಟ್ಟು)

ಭೃಂಗವು ಅಲ್ಪಾಯುಷಿ. ಆದರೆ ಅದರ ಜೀವಿತದ ಪ್ರತಿಕ್ಷಣವು ಕ್ರಿಯಾಶೀಲ. ಸುಂದರ ಹುಳುವು ಸದಾ ಲವಲವಿಕೆಯಿಂದಿದ್ದು ಮಧು ಸಂಗ್ರಹಿಸಿ ಜೇನು ಹುಟ್ಟುಕಟ್ಟಿ ತನ್ನೆಲ್ಲರನ್ನೂ ಒಳಗೊಂಡು ಬದುಕುವುದು ಈ ನೆಲದ ಜನರಿಗೆ ಒಂದು ಆದರ್ಶ. ಅನಂತಶಕ್ತ ಭಗವಂತನನ್ನು ಬೇಂದ್ರೆಯವರು 'ಹುಟ್ಟದ ಹುಟ್ಟು' ಎಂದಿದ್ದಾರೆ.

ಮುಟ್ಟದ ಮಾಟದ
ಹುಟ್ಟದ ಹುಟ್ಟಿಗೆ
ಜೇನಿನ ಥಳಿಮಳಿ
ಸನಿಹ ಹನಿ
(ನಾಕುತಂತಿ)

'ಪರಬ್ರಹ್ಮನಿಗೆ ಆದಿಯೂ ಇಲ್ಲ ಅಂತ್ಯವೂ ಇಲ್ಲ. ಅಂದರೆ ಹುಟ್ಟೂ ಇಲ್ಲ, ಸಾವೂ ಇಲ್ಲ. ಅದನ್ನು ಬೇಂದ್ರೆಯವರು ಪ್ರತಿಮಾ ಪೂರ್ವಕವಾಗಿ 'ಮುಟ್ಟದ ಮಾಟದ, ಹುಟ್ಟದ ಹುಟ್ಟಿಗೆ' ಎಂದಿದ್ದಾರೆ. ಅದು ಜೇನುಹುಟ್ಟಿನಂತಹ ಸೃಷ್ಟಿ. ಅಂತಹದರ ಫಲವೆಂದರೆ 'ಜೇನಿನ ಥಳಿ ಮಳಿ', ಸಿಹಿ ತಳಿಯ ಮಳೆ ಅರ್ಥಾತ್ ಅಮೃತ ವರ್ಷ. ಅದು ಹತ್ತಿರದಲ್ಲೇ 'ಸನಿಹಹನಿ' ಯಾಗಿ ಅಮೃತಧಾರೆಯ ಬಿಂದುಗಳನ್ನು ತೊಟ್ಟಿಕ್ಕುವ ಆನಂದ ವೃಷ್ಟಿ.

* * * *

ಮನ್ಮಥನ ಕಬ್ಬಿನ ಬಿಲ್ಲಿಗೆ ತುಂಬಿಗಳ ಸಾಲೇ ಹೆದೆ (ದಾರ). ಅದನ್ನು ಝೇಂಕಾರಿಸಿದಾಗ ಎಂತಹ ಮುನಿಗಳೂ ಕಾಮನ ಸೆಳೆತಕ್ಕೆ ಒಳಗಾಗುವರು ಎಂಬುದು ಕವಿಸಮಯ. ಅಂತಹ ಎಲ್ಲರನ್ನೂ ತನ್ನತ್ತ ಸೆಳೆವ ತುಂಬಿಯ ಬೆನ್ನೇರಿ ಕಲ್ಪನಾವಿಲಾಸ ಹೊರಟಿದೆ!

ತನ್ನ ಜೀವನಾನುಭವದ ಮಧುರ ನೆನಪನ್ನು ಕಾವ್ಯವಾಗಿ ನೀಡಿ ಅದರ ಆನಂದದಲ್ಲಿ ಲೀನವಾಗುವ ಕವಿಯೂ ಒಂದು ಭೃಂಗವೆ. ಭೃಂಗ ತನ್ನ ಗುಂಯ್‌ಗುಡುವ ನಾದದೊಡನೆ ಒಂದು ಲಯಬದ್ಧ ನಡೆಯನ್ನು ಹೊಂದಿ, ಚಾಂಚಲ್ಯದ ನೋಟದೊಡನೆ ಬಣ್ಣ ಬೆಡಗನ್ನು ಪ್ರದರ್ಶಿಸುತ್ತ ಮರೆಯಾಗುತ್ತದೆ. ಆದರೂ ಅದರ ಮಿಂಚಿನ ಚಲನೆ ಮನದಲ್ಲಿ ಹಾಗೆಯೇ ಉಳಿಯುತ್ತದೆ. ಕವಿಯ ಸೌಂದರ್ಯದ ಆವಿಷ್ಕಾರವು ಭೃಂಗದಂತೆ ಗೋಚರಿಸಿ ತಕ್ಷಣ ಮಾಯವಾಗುವ ಒಂದು ಫ್ಲಾಷ್‌ನಂತಹದು.

ಬೆಳಕಿನಲ್ಲಿ ಸದಾ ಗುಂಯ್‌ಗುಡುತ್ತಾ ಹರಿದಾಡುವ ಕಪ್ಪು ಬಣ್ಣದ ದುಂಬಿ ಬೇಂದ್ರೆಯವರಿಗೆ ಹಗಲು ನಕ್ಷತ್ರದಂತೆ. ಅದು ಸರಿದಾಡುವುದೇ ಮಿಂಚು ಹರಿದಂತೆ. ಅದೊಂದು ನಗೆಯ ಅಲೆ, 'ಮಿಂಚಿ ಮಾಯವಾಗುತ್ತಿತ್ತು ಒಂದು ಮಂದಹಾಸಾ'.

ನೆಲದ ರಸಗಂಧವನ್ನು ಹೀರಿದ ತರುವಿನಿಂದ ಹೊಮ್ಮಿದ ಹೂವಿನ ಮಕರಂದ ಸವಿದ 'ತುಂಬಿ' ಗಗನಮುಖಿಯಾಗಿ, ನೆಲಬಾನುವಿನ ಮಧುರ ಬಾಂಧವ್ಯದ ಸವಿಗೆ ಪ್ರತಿಮೆಯಾಗಿದೆ. ಈ ಕವನದ ನಾದವೇ ಮಧುಭಾವವನ್ನುಂಟು ಮಾಡುವುದನ್ನು ಎರಡನೆಯ ನುಡಿ ಧ್ವನಿಸುತ್ತದೆ. 'ತುಂಬಿ' ಯಲ್ಲಿಯ ಅಂತಃಶಕ್ತಿ ಚೇತನ ರಸಲಹರಿಯ ಪ್ರಕಟರೂಪ ಜೇನು! ಹಿಗ್ಗು! ವಿಕಾಸ! ಆಹ್ಲಾದ!

ಕಾವ್ಯದ ಪ್ರಯೋಜನ ಏನು? ಎಂಬ ಪ್ರಶ್ನೆಗೆ ಉತ್ತರ; ಕಾವ್ಯ ರಸಾಸ್ವಾದನೆಯ ಆಹ್ಲಾದ ಎಂಬುದಾಗಿದೆ. ಅದನ್ನು ಬೇಂದ್ರೆಯವರು ಪ್ರಶ್ನೋತ್ತರವಾಗಿ ತಿಳಿಸಿರುವ ರೀತಿ ಮಧುಮಯ.

'ಏನು?ಏನು?' ಪ್ರಶ್ನೆ ತನ್ನೊಳಗೆ ಉತ್ತರ ಅಡಗಿಸಿಟ್ಟಂತೆ ಮಾರ್ನುಡಿಯುತ್ತದೆ– 'ಜೇನು?ಜೇನು?'

ಕಾವ್ಯರ್ಷಿ ಬೇಂದ್ರೆಯವರಿಗೆ ತನ್ನ ತಪಸ್ಸು ಗೀತವಾಗಿ ಹರಿದು ಸಹೃದಯರನ್ನು ಅಲೌಕಿಕ ಭಾವಕ್ಕೆ ಕೊಂಡೊಯ್ಯುವ ಸಮರ್ಥ ಸಾಧನವಾಗಿದೆ ಎಂಬ ಹೆಮ್ಮೆ ಇದೆ. ಹಾಗಾಗಿ ನುಡಿದಿದ್ದಾರೆ. 'ಓಂಕಾರದ ಶಂಖನಾದಕಿಂತ ಕಿಂಚಿದೂನಾ'

ಭೃಂಗದ ಗುಂಗು ನಾದದ ಇಂಪು. ಅದರ ವಿಶಿಷ್ಟ ಸಂಮೋಹನ ಬೆಡಗು ಬಿನ್ನಾಣದಲ್ಲಿ 'ಅಲೌಕಿಕ ರಸ' ಪ್ರವಹಿಸುತ್ತದೆ. ಆ ರಸಾನಂದದಲ್ಲಿ ಕವಿಯಂತೆ ಸಹೃದಯರು ಒಂದಾಗಿ ಹೋಗುತ್ತಾರೆ: 'ಕವಿಯ ಏಕತಾನ ಕವನದಂತೆ ನಾದಲೀನಾ'.

****

'ಭಾವಗೀತ'ವ ಕಲ್ಪನಾ ವಿಲಾಸವು ಜೀವನತತ್ತ್ವ, ಚಿಂತನೆ, ಸವಿಧ್ಯಾನವನ್ನು ಹೊಂದಿ ಭೃಗಂದ ಬೆನ್ನೇರಿ ಸಾಗಿದೆ. ಅದು ತನ್ನ ಹೃದಯದಲ್ಲಿ ಸಿಹಿಯಾದ ಮಧುವನ್ನು ತುಂಬಿಕೊಂಡು ಕ್ರಿಯಾಶೀಲವಾಗಿ, ಸದಾ ಚಟುವಟಿಕೆಯಿಂದಿರುವ

ಮಧುಕರನ ಬೆನ್ನೇರಿ ಸಾಗಿದೆ. ಅದೊಂದು ರಹಸ್ಯ ಪೂರ್ಣವಾದ, ಬಣ್ಣಿಸಲಾಗದ ಬೃಹದ್ಭಾವಯಾನ. ಮಧುಸಂಗ್ರಹದ ಆನಂದ ಲಹರಿಯ ಪುನೀತ ಪಯಣ.

ಕಾವ್ಯ ಸೃಷ್ಟಿಯು ಅಂತಃಶ್ಚೇತನವಾಗಿ ಒಡಮೂಡಿ ಕಲಾತ್ಮಕವಾಗಿ ಹೊಮ್ಮಿ ಬರಬೇಕು ಎಂಬುದನ್ನು ಬೇಂದ್ರೆಯವರು 'ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ' ಎಂಬ ಪ್ರತಿಮೆಯಲ್ಲಿ ತಿಳಿಸಿದ್ದಾರೆ. ಅದು ಅವರ ಕಲ್ಪನೆ ಮತ್ತು ಆಲೋಚನೆ ಪ್ರಕೃತಿಯೊಡನೆ ಒಂದಾಗಿ ನಲಿದು ಸೃಷ್ಟಿಗೊಂಡ ರೀತಿ. 'ಉಸಿರಿನಿಂದೆ ಹುಡುಕುವಂತೆ ತನ್ನ ಬಾಳಮೇಲಾ' ಎಂಬುದು ತಾಪಸಿಯ ಧ್ಯಾನವನ್ನು ತಿಳಿಸುತ್ತಲೆ ಅವನು ತೇಜಸ್ವಿಯಾಗಿ ಪ್ರಕಾಶಿಸುವುದನ್ನು ಹೇಳಿದೆ. ಅದು ಏಕಾಗ್ರತೆ, ಸಾಧನೆ. ತನ್ನತನದಿಂದಲೇ ತನ್ನ ವ್ಯಕ್ತಿತ್ವ ರೂಪಿಸಿಕೊಳ್ಳುವ ಕಸುವು, ಜಾಣ್ಮೆ, ಕಲೆಗಾರಿಕೆಯ ವಿಕಾಸ ಪಥ.

****

ಮಂತ್ರ ಮಾತು ಅಲ್ಲ. ಏನೋ ಹಿರಿದಾದುದು. ಅದು ದೈವಿ ಆಲೋಚನೆಯಲ್ಲಿ ಗಟ್ಟಿಗೊಂಡ ಮನಸ್ಸಿನ ಶಕ್ತಿ. ಅದು ಪ್ರಾಪಂಚಿಕ ಜಂಜಡದಿಂದ ಮುಕ್ತವಾಗಲು ಕೈಗೊಂಡ ದೈವಿಕತೆಯ ಆವಿಷ್ಕಾರ. ಉನ್ನತ ನೆಲೆಯ ಸ್ವತಂತ್ರ ಚಿಂತನೆ. ಪರಿಶುದ್ಧತೆಗೆ ಸಾಗುವ ವಿಶಿಷ್ಟ ತಂತ್ರ. ಮಂತ್ರ ಸಾಧನೆಯಂತೆ ಕಾವ್ಯದ ಅನುಸಂಧಾನ. ಕಾವ್ಯವು ನಾವು ಕಾಣುವ ಹೊರಜಗತ್ತು ಮತ್ತು ನಮ್ಮ ಆಂತರ್ಯದ ಒಳವಿಶ್ವದ ಸಂಯೋಗದಿಂದ ಸೃಷ್ಟಿಗೊಂಡರೂ ಅತಿಸ್ವತಂತ್ರವಾದದ್ದು. ಅದು ತನ್ನದೇ ಸತ್ವದಿಂದ ಮೊಳಗುವ ವಿಶಿಷ್ಟ ಸ್ವತಂತ್ರ ಪ್ರಕಾಶ. ಅದು ತೂರ್ಯಾವಸ್ಥೆಯಲ್ಲಿಯ ಮೊಳಗು.

ತಿರುಗುತ್ತಿತ್ತು ತನ್ನ ಸುತ್ತ ಮೂಕಭಾವ ಯಂತ್ರಾ
ಗರ್ಭಗುಡಿಯ ಗರ್ಭದಲ್ಲಿ ಪಡಿನುಡಿಯುವ ಮಂತ್ರಾ
ಮೂಡಿ ಮೂಡಿ ಮುಳುಗಿ ಮುಳುಗಿ ಮೊಳಗುವೊಲು ಸ್ವತಂತ್ರಾ.

****

ಸೃಷ್ಟಿದೇವಿಯ ಆರಾಧನೆಗೆ ಭೃಂಗದ ಬೆನ್ನೇರಿ ಹೊರಟ ಕಲ್ಪನಾ ವಿಲಾಸವು ಆ ಭವ್ಯ ಪ್ರಕೃತಿಯ ಲೀಲಾವಿಲಾಸದಲ್ಲಿ ಒಂದಾಗಿ ಹೋಗಿದೆ.

'ಧೂಪ ಧೂಮಾ ಲಹರಿ ಲಹರಿ ಕಂಪಬಳ್ಳಿ' ಯಲ್ಲಿ ತೊನೆದಾಡಿ ಕಂಪಿಡಿದು ಹೋಗಿದೆ. ಅದರ 'ಚಿತ್ತರಂಗ ಭೂಮಾ' ಆಗಿದೆ. 'ಯೋ ವೈ ಭೂಮಾ ತತ್ಸುಖಂ ನಾಲ್ಪೇಸುಖಮಸ್ತಿ' ಎಂಬ ಉಪನಿಷತ್ತಿನ ಋಷಿವಾಣಿಯಂತೆ ಯಾವುದು ಭೂಮವೋ ಅಂದರೆ ಮಹತ್ತಾದುದೋ ಅದೇ ಸುಖ. ಅಲ್ಪದರಲ್ಲಿ ಸುಖವಿಲ್ಲ ಎಂಬ ಅನುಭವದಲ್ಲಿದೆ. ಆಗ ಅಲ್ಲಿ ಅರಳಿದ್ದು ಪ್ರೇಮಾ. ಪ್ರೇಮಾ (creative force) 'ದಾಂಗುಡಿಗಳ ಬಿಡುತಲಿತ್ತು. ಅರಳಲಿತ್ತು ಪ್ರೇಮಾ'

ಪ್ರೇಮ ಭಾವಾಂಕುರವಾದ ಮೇಲೆ ಅದು ಸೃಷ್ಟಿಕ್ರಿಯೆಗೆ ತೊಡಗುತ್ತದೆ. ಅದು ಭಾವಭೃಂಗವು ಪದಪದವನ್ನು ಹೊಕ್ಕು ನೀರ ಹೀರುವ ಕ್ರಿಯೆ. ನೀರುಗಟ್ಟಿಸುವ; ನೀರು ನಿಲ್ಲಿಸುವ ಆನಂದ. ಅಲ್ಲಿಯ ಪ್ರೇಮಕ್ರಿಯೆಯಲ್ಲಿ ಎಲ್ಲವೂ ಫಲರೂಪಿಯಾಗುವುದಿಲ್ಲ. ಅದು 'ಅಯ್ಯೊನೋವೆ! ಅಹಹ ಸಾವೆ! ವಿಫಲ ಸಫಲ ಜೀವಾ' ಎಂಬ ಸಹಸ್ರಾರು ವೀರ್ಯಬೀಜಗಳಲ್ಲಿ ಕೆಲವೇ ಸಫಲವಾಗುವ ರೀತಿಯದು. ಸಫಲ ಪದಗಳು ಪ್ರತಿಭೆಗೆ ದಕ್ಕಿದ ನಂತರ ಭಾವ ಆನಂದಲಹರಿಗೆ ಸಿಕ್ಕಿ ಸುಖಿಸುತ್ತದೆ. ಬಿದಿಗೆ ಚಂದ್ರನನ್ನು ಕಂಡು ಅವನಂತೆ ವಿಕಾಸಗೊಳ್ಳತೊಡಗುತ್ತದೆ. ಅದು ಸದಾಸ್ಮಿತವಾಗಿ ಮುಗಿಲ ಚಿಕ್ಕೆಯೊಡನೆ ಸ್ನೇಹವನ್ನು ಬೆಳೆಸಲು ಮುಗಿಲಿಗೆ ಹಾರತೊಡಗುತ್ತದೆ.

ಹೀಗೆ ಉನ್ಮುಖವಾಗಿ ಕವಿ ಪ್ರತಿಭೆ ಸಾಗಿದರೂ ಅದರ ಸಹಜ ಸುಖ ನೆಲದ್ದು. ಇಲ್ಲಿಯ ಮೋಹಾ, ಸೌಂದರ್ಯ, ಬೆಡಗಿನ ಸೆಳೆತದಲ್ಲಿಯೂ ಅಮರತ್ವವಿದೆ. 'ಅಲ್ಲು ಇಲ್ಲು ಚೆಲುವು ನಿಂತು ಹಾಕುತಿತ್ತು ತಾಳಾ'. ಅದರೊಡನೆ ತಾನೂ ತಾಳ ಹಾಕಿ, ಏನೇ ಎಡರು ತೊಡರಿದ್ದರೂ 'ಪ್ರಾಣತಂತು ಹೆಣೆಯುತ್ತಿತ್ತು ಬಾಳಾ'. ಅದರ ನಿರಂತರ ಬೆಳವಣಿಗೆ ಉಲ್ಲಾಸ ಕಂಡು ಅನಂತಕಾಳನಾದ ಯಮ 'ಬಂತೆಲ್ಲಿಗೆ?' ಎಂದು ಪ್ರಶ್ನೆ ಕೇಳಿ ಮೌನವಾಗಿದ್ದಾನೆ! ಆ ಪ್ರಶ್ನೆಯಲ್ಲಿ ಅವನೂ ಅದರ ಸುಖವನ್ನು ಅನುಭವಿಸುತ್ತಿರುವನು– ಎಂಬ ಭಾವವಿದೆ.

ನಾನಲ್ಲ
ನೀನಲ್ಲ
ನನ್ನಲ್ಲಿ ನೀನಿಲ್ಲ
ಸಾವಿನ ನೋವಿಲ್ಲ ॥ ಕುಣಿಯೋಣು॥

***

ಇದ್ದದ್ದು ಮರೆಯೋಣ
ಇಲ್ಲದ್ದು ತೆರೆಯೋಣ
ಹಾಲ್ಜೇನು ಸುರಿಸೋಣ ॥ ಕುಣಿಯೋಣು॥
(ಗರಿ : ಕುಣಿಯೋಣು ಬಾರ)

ಕುಣಿಯೋಣು ಬಾರ ಎಂದು ಕಾಳನೊಡನೆ ಹೆಜ್ಜೆ ಹಾಕಿ ಆಹ್ಲಾದದಿಂದ 'ಓಗ್ಗಲಿ ಓರಿಮುಖ' ಎಂದು ಕುಣಿದು ನಲಿಯುತ್ತದೆ!

ಆಗ ಅದರ ಹಿಗ್ಗು : 'ಮಾತು ಮಾತು ಮಥಿಸಿ ಬಂದ ನಾದದ ನವನೀತಾ.' ತನ್ನ ಹಿಗ್ಗನ್ನು ಇತರರಿಗೆ ಬೀರುತ್ತ, ಅದರ ಪ್ರತಿಫಲನವಾಗಿ ತಾನು ಮತ್ತೆ ಮತ್ತೆ ಹಿಗ್ಗಿ ವಿಕಾಸಗೊಳ್ಳುವ ಅನಂತ ಆಹ್ಲಾದ. ಅದು ರೂಪಾತೀತ ಭಾವಾತೀತವಾದ ಆನಂದ. ಯಾವುದೇ ಸ್ವಾರ್ಥ ಕೇಂದ್ರಿತ ಆರ್ಥಿಕ ಲಾಭ ನಷ್ಟಗಳಿಂದ ಮುಕ್ತವಾದ ಸಂತೋಷ. 'ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತಾ'. ತನ್ನ ಫಲವನ್ನು ತಾನೇ ಸಂಪಾದಿಸಿ ಇತರರಿಗೂ ಹಂಚುವ ನಿಧಿ 'ಭಾವಗೀತ'. ಅದೊಂದು ಬಗೆಯಲ್ಲಿ ಆತ್ಮೋದ್ಧಾರದ ಸುಖ. ಬೇಂದ್ರೆಯವರ ಜೀವನದ ಅತ್ಯುತ್ತಮ ಆವಿಷ್ಕಾರ. ವಿಶ್ವದ ಶ್ರೇಷ್ಠ ಕವನಗಳ ಸಾಲಿನಲ್ಲಿ ಹೊಳೆವ ಮಾಣಿಕ್ಯ.

* * *

# ಅನುಬಂಧ ೧

## ದ.ರಾ. ಬೇಂದ್ರೆಯವರ ಜೀವನದ ಪ್ರಮುಖ ಘಟ್ಟಗಳು

೩೧-೧-೧೮೯೬ ಜನನ. ಮಾಘವದ್ಯ ಪ್ರತಿಪದೆ, ಗುರು ಪ್ರತಿಪದೆ, ಮನ್ಮಥನಾಮ ಸಂವತ್ಸರ. ಧಾರವಾಡದ ಪೋತ್ನೀಸ ಓಣಿ, ಗುಣಾರಿಯವರ ಮನೆಯಲ್ಲಿ.

೧೮೯೮ ತಮ್ಮ ಚಿದಂಬರ ಹುಟ್ಟಿದ, ತೀರಿಕೊಂಡ.

೧೯೦೨ ಕನ್ನಡ ಶಾಲೆ ಬಿನ್ ಇಯತ್ತೆ, ೧ನೆಯ ಇಯತ್ತೆ ೩ ತಿಂಗಳಲ್ಲಿ ಪಾಸು. ಶ್ರೀಧರ ಖಾನೋಳಕರ ಗೆಳೆತನ. ಶ್ರೀಗೋಂದವಲೇಕರರ ದರ್ಶನ, ತಮ್ಮ ರಾಘೂನ ಜನನ ಕಾಮನ ಕಟ್ಟೆಯ ಗೋಖಲೆಯವರ ಮನೆಯಲ್ಲಿ. ಗೋಖಲೆ ಗೋವಿಂದರಾಯರು ತೀರಿದರು.

೧೯೦೩ ೨ನೆ ಇಯತ್ತೆ ಮುಗಿಯಿತು. ತಮ್ಮ ಕೃಷ್ಣನ ಜನನ.

೧೯೦೭ ಇಂಗ್ಲೀಷ್ ೨ನೆ ಇಯತ್ತೆ. ನವಂಬರದಲ್ಲಿ ತಂದೆ ರಾಮಚಂದ್ರ ಬೇಂದ್ರೆ ತೀರಿಕೊಂಡರು.

೧೯೧೦ ರಾಘೂ ತೀರಿಕೊಂಡ.

೧೯೧೩ ಮ್ಯಾಟ್ರಿಕ್ ಪಾಸಾಯಿತು. ಅಜ್ಜಿ ಗೋದೂಬಾಯಿಯ ಮರಣ.

೧೯೧೪ ಪುಣೆಯ ಫರ್ಗ್ಯುಸನ್ ಕಾಲೇಜಿಗೆ ಸೇರಿದ್ದು.

೧೯೧೮ ಬಿ.ಎ., ಪಾಸಾಯಿತು. 'ತುತೂರಿ', 'ಕೋಗಿಲೆ ಕೋಗಿಲೆ ಎಂದು ಬಂದೆ ನೀ ಹೇಳೆ ಹೇಳೆ ಗೆಳತಿ' ಕವನದ ರಚನೆ. ನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನ ಪ್ರಸಂಗದಲ್ಲಿ ಕವಿತಾ ವಾಚನ. ಜೂನ್ ೪ ರಿಂದ ವಿಕ್ಟೋರಿಯಾ ಹೈಸ್ಕೂಲು, ಧಾರವಾಡದಲ್ಲಿ ಶಿಕ್ಷಕ ವೃತ್ತಿಯ ಪ್ರಾರಂಭ.

೧೯೧೯ ಲಕ್ಷ್ಮೀಬಾಯಿ (ಗಂಗೂತಾಯಿ) ಇವರೊಂದಿಗೆ ವಿವಾಹ, ಹುಬ್ಬಳ್ಳಿಯಲ್ಲಿ.

೧೯೨೧ ರಾಷ್ಟ್ರೀಯ ಶಾಲೆಯಲ್ಲಿ ಶಿಕ್ಷಕ.

೧೯೨೨ 'ಕೃಷ್ಣಾ ಕುಮಾರಿ' ಕಥನ ಕವನದ ಪ್ರಕಟಣೆ. ಗೆಳೆಯರ ಗುಂಪಿನ ಕನಸು. ಮೊದಲ ಮಗ ಕ್ಷೇಮೇಂದ್ರನ ಜನನ. ದಾವಣಗೇರಿ ಸಾಹಿತ್ಯ ಸಮ್ಮೇಳನಕ್ಕೆ ಹೋದದ್ದು.

೧೯೨೩ ಮೇದಲ್ಲಿ ಕ್ಷೇಮೇಂದ್ರ ತೀರಿಕೊಂಡ. 'ಜಯಕರ್ನಾಟಕ' ಪತ್ರಿಕೆಯೊಂದಿಗೆ ಸಂಬಂಧ. ವಿಜಾಪುರ ಸಾಹಿತ್ಯ ಸಮ್ಮೇಳನಕ್ಕೆ ಹೋದದ್ದು.

೧೯೨೪ ತಾಯಿ ತೀರಿದಳು. ಎರಡನೆಯ ಮಗ-ರಾಮನ ಜನನ.

೧೯೨೫ ಮತ್ತೆ ನ್ಯೂ ಇಂಗ್ಲೀಷ್ ಸ್ಕೂಲಿನಲ್ಲಿ (ಮೊದಲಿನ ವಿಕ್ಟೋರಿಯಾ ಹೈಸ್ಕೂಲೇ ಇದು) ಶಿಕ್ಷಕ.

೧೯೨೬ ನಾಡಹಬ್ಬ ಪ್ರಾರಂಭಿಸಿದ್ದು. 'ಸ್ವಧರ್ಮ' ಪತ್ರಿಕೆ ಕೈಕೊಂಡದ್ದು.

೧೯೨೭ ಮೂರನೆಯ ಮಗ–ಭಾಸ್ಕರ ಹುಟ್ಟಿದ್ದು ; ತೀರಿದ್ದು.

೧೯೨೮ ನಾಲ್ಕನೆಯ ಮಗ–ಪಾಡುರಂಗನ ಜನನ. ಉಪನಿಷದ್ ರಹಸ್ಯ ಪ್ರಕಟಣೆ. "ನನ್ನದು ಈ ಕನ್ನಡ ನಾಡು" ಕೃತಿ ಗೆಳೆಯರ ಗುಂಪಿನಿಂದ ಪ್ರಕಟಣೆ.

೧೯೨೯ ಚಿಕ್ಕಪ್ಪ, ಚಿಕ್ಕಮ್ಮ – ಸಾಧನಕೇರಿಯಲ್ಲಿ ಮನೆಯನ್ನು ಕೊಡಿಸಿದ್ದು. 'ಹಕ್ಕಿ ಹಾರುತಿದೆ' ಕವನ ವಾಚನ, ಆಲೂರು ವೆಂಕಟರಾಯರು 'ಜಯಕರ್ನಾಟಕ' ಪತ್ರಿಕೆಯನ್ನು ಗೆಳೆಯರ ಗುಂಪಿಗೆ ವಹಿಸಿಕೊಟ್ಟಿದ್ದು.

೧೯೩೦ 'ಹಕ್ಕಿ ಹಾರುತಿದೆ' ಕವನ ಸಂಗ್ರಹ ಗೆಳೆಯರ ಗುಂಪಿನಿಂದ ಪ್ರಕಟಣೆ. ಮೈಸೂರು ಲೇಖಕರ ಗೋಷ್ಠಿಯ ಅಧ್ಯಕ್ಷ.

೧೯೩೧ ಕಾರವಾರ ಸಾಹಿತ್ಯ ಸಮ್ಮೇಳನಕ್ಕೆ ಹೋದದ್ದು.

೧೯೩೨ 'ಗರಿ' ಕವನ ಸಂಕಲನದ ಪ್ರಕಟಣೆ. 'ನರಬಲಿ' ಕವನ ರಚಿಸಿದ ಕಾರಣದಿಂದ ಹಿಂಡಲಗಿ ಜೇಲುವಾಸ. ಮುಗದ ಗ್ರಾಮದಲ್ಲಿ ನಜರಬಂದಿ.

೧೯೩೩ ಎಂ.ಎ., ಅಭ್ಯಾಸ ಪುಣೆಯಲ್ಲಿ.

೧೯೩೪ ಮಗಳು–ಲಲಿತಾ ಹುಟ್ಟಿದಳು; ತೀರಿದಳು. 'ಮೂರ್ತಿ ಮತ್ತು ಕಾಮಕಸ್ತೂರಿ' ಪ್ರಕಟಣೆ.

೧೯೩೫ ಎಂ.ಎ., ಪಾಸು ಆಗಿದ್ದು. ಮಗ–ವಾಮನನ (ಬಾಳ) ಜನನ. ಮುಂಬೈ ಕವಿ ಸಮ್ಮೇಳನದ ಅಧ್ಯಕ್ಷ.

೧೯೩೬ ರಿಂದ ೧೯೪೪ ಸ್ಥಿರ ನೌಕರಿ ಇಲ್ಲದೆ ಅಲೆದಾಡಿದ್ದು.

೧೯೩೭ ಮಗಳು–ಪ್ರೇಮಳ ಜನನ. 'ಸಖೀಗೀತ', 'ಸಾಹಿತ್ಯ ಮತ್ತು ವಿಮರ್ಶೆ' ಪ್ರಕಟಣೆ.

೧೯೩೮ 'ನಾದಲೀಲೆ', 'ಉಯ್ಯಾಲೆ' ಪ್ರಕಟಣೆ. 'ಜೀವನ' ಪತ್ರಿಕೆಯ ಸಂಪಾದಕತ್ವ

೧೯೩೯ ಮಗಳು–ಮಂಗಲಳ ಜನನ. 'ನಿರಾಭರಣ ಸುಂದರಿ', 'ಸಾಹಿತ್ಯ ಮತ್ತು ಸಂಶೋಧನೆ' ಪ್ರಕಟಣೆ.

೧೯೪೦ ಧಾರವಾಡದಲ್ಲಿ ಸಾಹಿತ್ಯ ಸಮ್ಮೇಳನ.

೧೯೪೧ ಗದಗಿನ ವಿದ್ಯಾದಾನ ಸಮಿತಿ ಹೈಸ್ಕೂಲ್‌ಗೆ ಹೆಡ್‌ಮಾಸ್ತರ್ ಆಗಿ ಹೋದದ್ದು.

೧೯೪೨ ಹುಬ್ಬಳ್ಳಿಯ ನ್ಯೂ ಇಂಗ್ಲೀಷ್ ಸ್ಕೂಲಿಗೆ ಶಿಕ್ಷಕ.

೧೯೪೩ ಪಾಂಡಿಚೇರಿ – ಶ್ರೀ ಮಾತಾರವಿಂದರ ದರ್ಶನ. ಪೂನಾದ ಬಿ.ಎಂ.ಸಿ.ಸಿ., ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕ. 'ಕನ್ನಡ ಮೇಘದೂತ' ಪ್ರಕಟಣೆ ಡಿಸೆಂಬರ್ ೨೬ ರಂದು ಶಿವಮೊಗ್ಗದಲ್ಲಿ ನಡೆದ ೨೭ನೇ ಕನ್ನಡ ಸಮ್ಮೇಳನದ ಅಧ್ಯಕ್ಷತೆ.

೧೯೪೪ ಸೊಲ್ಲಾಪುರದ ಡಿ.ಎ.ವಿ., ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕ. ಮಗ–ಆನಂದ ಹುಟ್ಟಿದ್ದು, ತೀರಿಕೊಂಡದ್ದು. ಮಗ ರಾಮ ತೀರಿಕೊಂಡದ್ದು.

೧೯೪೬ ಧಾರವಾಡ ಸಾರ್ವಜನಿಕರಿಂದ ೫೦ನೆಯ ಹುಟ್ಟುಹಬ್ಬದ ಆಚರಣೆ. ಸನ್ಮಾನ ೧೦ ಸಾವಿರ ನಿಧಿ ಅರ್ಪಣೆ. 'ಹಾಡುಪಾಡು' ಪ್ರಕಟಣೆ.

೧೯೫೧ 'ಗಂಗಾವತರಣ' ಪ್ರಕಟಣೆ.

೧೯೫೬ ಡಿ.ಎ.ವಿ., ಕಾಲೇಜು ಸೊಲ್ಲಾಪುರದ ಕನ್ನಡ ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತಿ. ಆಕಾಶವಾಣಿ, ಧಾರವಾಡ ಕೇಂದ್ರದ ಸಾಹಿತ್ಯ ಸಲಹೆಗಾರ. ಸೊಲ್ಲಾಪುರ, ಪುಣೆಯಲ್ಲಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಬೆಂಗಳೂರಿನಲ್ಲಿ ೬೦ನೆಯ ಹುಟ್ಟುಹಬ್ಬದ ಆಚರಣೆ– ಸನ್ಮಾನ.

೧೯೫೯ 'ಅರಳು–ಮರಳು' ಕವನ ಸಂಗ್ರಹ ಗುಚ್ಚಕ್ಕೆ ೧೯೫೮ರ ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ.

೧೯೬೨ ತುಮಕೂರಿನ ಪುರಸಭೆಯವರಿಂದ ಸನ್ಮಾನ.

೧೯೬೪ ಮೈಸೂರು ದಸರಾ ಮಹೋತ್ಸವ ಸಮಿತಿಯವರಿಂದ ಸನ್ಮಾನ.

೧೯೬೫ ಮರಾಠಿ 'ಸಂವಾದ' ಗ್ರಂಥಕ್ಕೆ ಮಹಾರಾಷ್ಟ್ರದ ಕೇಳಕರ ಪ್ರಶಸ್ತಿ.

೧೯೬೬ ಮೈಸೂರು ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪದವಿ.

ಶಿರಹಟ್ಟಿಯಲ್ಲಿ ೭೦ನೆಯ ಹುಟ್ಟುಹಬ್ಬದ ಸನ್ಮಾನ. ಕರ್ನಾಟಕ ಸರ್ಕಾರದಿಂದ ಆಜನ್ಮ ವಿಶ್ರಾಂತಿವೇತನ ಗೌರವ. ಹೈದರಾಬಾದಿನ ಹಿಂದಿ ಪ್ರಚಾರ ಸಭಾ ಅವರಿಂದ 'ಸಾಹಿತ್ಯ ಆಚಾರ್ಯ' ಪ್ರಶಸ್ತಿ. ಆಗಸ್ಟ್ ೧೨ ರಂದು ಪತ್ನೀ ವಿಯೋಗ

೧೯೬೮ 'ಪದ್ಮಶ್ರೀ' ಪ್ರಶಸ್ತಿ. ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪದವಿ.

೧೯೬೯ ಫೆಲೋ, ಸಾಹಿತ್ಯ ಅಕಾಡೆಮಿ (ದೆಹಲಿ) ಗೌರವ.

೧೯೭೨ 'ಕರ್ನಾಟಕ ಕವಿಕುಲತಿಲಕ' ಪ್ರಶಸ್ತಿ – ಶ್ರೀ ಅದಮಾರು ಮಠ–ಉಡುಪಿ ಪರ್ಯಾಯ. ೭೫ನೇ ಹುಟ್ಟುಹಬ್ಬದ ಸನ್ಮಾನ ಸೊಲ್ಲಾಪುರ ಮತ್ತು ಪುಣೆಯಲ್ಲಿ. ಕರ್ನಾಟಕ ಸರಕಾರದಿಂದ ಸಾಕ್ಷ್ಯ ಚಿತ್ರ ನಿರ್ಮಾಣ.

೧೯೭೪ 'ನಾಕುತಂತಿ' ಕವನ ಸಂಗ್ರಹಕ್ಕೆ ೧೯೭೩ ರ ಜ್ಞಾನಪೀಠ ಪ್ರಶಸ್ತಿ.

೧೯೭೬ ಕಾಶೀ ವಿದ್ಯಾಪೀಠ, ವಾರಣಾಸಿ – ಇವರಿಂದ ಗೌರವ ಡಾಕ್ಟರೇಟ್ ಪದವಿ.

೧೯೭೭ ಆಕಾಶವಾಣಿ ಪ್ರಸಾರದ ಸುವರ್ಣ ಮಹೋತ್ಸವದ ಸನ್ಮಾನ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು – ವಜ್ರ ಮಹೋತ್ಸವದ ಸನ್ಮಾನ. 'ಇಳಿದು ಬಾ ತಾಯಿ' ಅಭಿನಂದನ ಗ್ರಂಥ ಪ್ರಕಟಣೆ.

೨೬–೧೦–೧೯೮೧ ಮುಂಬೈ ಹರಿಕಿಶನ್‌ದಾಸ್ ಆಸ್ಪತ್ರೆಯಲ್ಲಿ ದುರ್ಮತಿ ಸಂವತ್ಸರ, ಅಶ್ವಯುಜ ಬಹುಳ, ದೀಪಾವಳಿ, ನರಕ ಚತುರ್ದಶಿಯ ದಿವಸ ನಿರ್ವಾಣ.

* * *

## ಅನುಬಂಧ -೨

### ದ.ರಾ. ಬೇಂದ್ರೆಯವರ ಕೃತಿಗಳು

| ಕಾವ್ಯ | | ಪ್ರಥಮ ಮುದ್ರಣ |
|---|---|---|
| ೧) | ಕೃಷ್ಣಾ ಕುಮಾರಿ | ೧೯೨೨ |
| ೨) | ಗರಿ | ೧೯೩೨ |
| ೩) | ಮೂರ್ತಿ ಮತ್ತು ಕಾಮಕಸ್ತೂರಿ | ೧೯೩೪ |
| ೪) | ಸಖೀಗೀತ | ೧೯೩೭ |
| ೫) | ಉಯ್ಯಾಲೆ | ೧೯೩೮ |
| ೬) | ನಾದಲೀಲೆ | ೧೯೩೮ |
| ೭) | ಕನ್ನಡ ಮೇಘದೂತ | ೧೯೪೩ |
| ೮) | ಹಾಡು-ಪಾಡು | ೧೯೪೬ |
| ೯) | ಗಂಗಾವತರಣ | ೧೯೫೧ |
| ೧೦) | ಮುಕ್ತಕಂಠ | ೧೯೫೬ |
| ೧೧) | ಸೂರ್ಯಪಾನ | ೧೯೫೬ |
| ೧೨) | ಹೃದಯ ಸಮುದ್ರ | ೧೯೫೬ |
| ೧೩) | ಚೈತ್ಯಾಲಯ | ೧೯೫೭ |
| ೧೪) | ಜೀವಲಹರಿ | ೧೯೫೭ |
| ೧೫) | ನಮನ | ೧೯೫೮ |
| ೧೬) | ಸಂಚಯ | ೧೯೫೯ |
| ೧೭) | ಉತ್ತರಾಯಣ | ೧೯೬೦ |
| ೧೮) | ಮುಗಿಲ ಮಲ್ಲಿಗೆ | ೧೯೬೧ |
| ೧೯) | ಯಕ್ಷ-ಯಕ್ಷಿ | ೧೯೬೨ |
| ೨೦) | ನಾಕುತಂತಿ | ೧೯೬೪ |
| ೨೧) | ಮರ್ಯಾದೆ | ೧೯೬೬ |
| ೨೨) | ಶ್ರೀಮಾತಾ | ೧೯೬೮ |
| ೨೩) | ಇದುನಭೋವಾಣಿ | ೧೯೭೦ |
| ೨೪) | ಮತ್ತೆ ಶ್ರಾವಣಾ ಬಂತು | ೧೯೭೩ |
| ೨೫) | ಚತುರೋಕ್ತಿ ಮತ್ತು ಇತರ ಕವನಗಳು | ೧೯೭೮ |
| ೨೬) | ಪರಾಕಿ | ೧೯೮೨ |

೯. ಅನುವಾದ

೧) ಉಪನಿಷದ್ರಹಸ್ಯ ಅಥವಾ ಭಾರತೀಯ ಅಧ್ಯಾತ್ಮಶಾಸ್ತ್ರ ಪೀಠಿಕೆಯು (ರಂ.ರಾ.ದಿವಾಕರ ಮತ್ತು ಶಂ.ಬಾ. ಜೋಶಿ ಅವರ ಜೊತೆ) ೧೯೨೮

೨) ಭಾರತೀಯ ನವಜನ್ಮ ೧೯೩೬

೩) ಶ್ರೀ ಅರವಿಂದ ಯೋಗ ಆಶ್ರಮ ಮತ್ತು ತತ್ತ್ವೋಪದೇಶ ೧೯೪೭

೪) ಚೀನದ ಬಾಳು ಬದುಕು ೧೯೫೦

೫) ನೂರೊಂದು ಕವನಗಳು ೧೯೬೨ (ನಾರಾಯಣ ಸಂಗಮ ಅವರ ಜೊತೆ)

೬) ಕಬೀರ ವಚನಾವಲಿ ೧೯೬೮ (ಜೋಶಿ ಗುರುನಾಥ ಅವರ ಜೊತೆ)

೭) ಭಗ್ನಮೂರ್ತಿ ೧೯೭೨

೮) ಗುರುಗೋವಿಂದ ಸಿಂಗ್ ೧೯೩೬ (ವಾಮನ ಬೇಂದ್ರೆ ಮತ್ತು ಕೆ.ಎಸ್. ಶರ್ಮಾ ಅವರ ಜೊತೆ)

೧೦. ಇಂಗ್ಲೀಷ್ ಗ್ರಂಥ

೧) A Theory of immortality ೧೯೭೭

೧೧. ಮರಾಠಿ ಕೃತಿಗಳು.

೧) ಸಂತ ಮಹಂತಾಂಚಾ ಪೂರ್ಣಶಂಭೋವಿಟ್ಠಲ ೧೯೬೩

೨) ಸಂವಾದ : ಕವನ ಮತ್ತು ವಿಮರ್ಶೆ, ಲೇಖನ ಇವುಗಳ ಸಂಗ್ರಹ ೧೯೬೫

೩) ವಿಟ್ಠಲ ಸಂಪ್ರದಾಯ, ಒಂದು ಭಾಷಣ ೧೯೬೫

೪) ಶಾಂತಲಾ, (ಕನ್ನಡ ಮೂಲ: ಕೆ.ವಿ. ಅಯ್ಯರ್) ೧೯೭೨

೫) ಉಮಾಲ (ಕವನ ಸಂಗ್ರಹ) ೧೯೯೧

***

## ಅನುಬಂಧ-೩

## ಹೆಚ್ಚಿನ ಓದಿಗಾಗಿ ಗ್ರಂಥಗಳು

ಅಂಬಿಕಾತನಯದತ್ತರ ಕಾವ್ಯದ ವಿಮರ್ಶಾಕೃತಿಗಳು


೧. ಆಮೂರ ಜಿ.ಎಸ್. ಭುವನದ ಭಾಗ್ಯ, ಸ್ನೇಹಪ್ರಕಾಶನ, ಬೆಂಗಳೂರು, ೧೯೯೧

೨. ಕೀರ್ತಿನಾಥ ಕುರ್ತಕೋಟಿ, ಭೃಂಗದ ಬೆನ್ನೇರಿ, ಮನೋಹರ ಗ್ರಂಥಮಾಲಾ, ಧಾರವಾಡ, ೧೯೭೫.

೩. ಕೀರ್ತಿನಾಥ ಕುರ್ತಕೋಟಿ, ಬಾರೋ ಸಾಧನಕೇರಿಗೆ, ಮನೋಹರ ಗ್ರಂಥಮಾಲಾ, ಧಾರವಾಡ, ೧೯೯೩.

೪. ಕೀರ್ತಿನಾಥ ಕುರ್ತಕೋಟಿ, ದ.ರಾ.ಬೇಂದ್ರೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೨.

೫. ಕೃಷ್ಣಪ್ಪ ಜಿ, ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ, ಶ್ರೀರಂಗ ಪ್ರಕಾಶನ, ಮೈಸೂರು, ೨೦೦೧.

೬. ಕೃಷ್ಣಪ್ಪ ಜಿ. ಹೂತಽದಹುಣಸಿ, ಶ್ರೀರಂಗಪ್ರಕಾಶನ, ಮೈಸೂರು, ೨೦೦೦

೭. ಕೃಷ್ಣಪ್ಪ .ಜಿ ಬರೆಹದಲ್ಲಿ ಬೇಂದ್ರೆಯವರ ಬದುಕು, ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ, ೨೦೦೮

೮. ಗೋಕಾಕ್ ವಿ.ಕೃ. ಬೇಂದ್ರೆಯವರ ಕಾವ್ಯಗುಣ ಹಾಗೂ ಪ್ರಯೋಗಶೀಲತೆ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೪.

೯. ಗೋಪಾಲಕೃಷ್ಣ ಅಡಿಗ, ಬೇಂದ್ರೆಯವರ ಕಾವ್ಯ, ಕನ್ನಡಸಂಘ, ಕ್ರೈಸ್ಟ್‌ಕಾಲೇಜ್, ಬೆಂಗಳೂರು ೧೯೯೧.

೧೦. 'ಜೀವಿ' ಕುಲಕರ್ಣಿ, ನಾಕಂಡ ಬೇಂದ್ರೆ; ಜೀವನ ಮತ್ತು ಸಾಹಿತ್ಯ, ಹರ್ಷವರ್ಧನ ಪ್ರಕಾಶನ, ಮುಂಬಯಿ, ೧೯೯೭

೧೧. ತಿರುಮಲೇಶ್ ಕೆ.ವಿ., ಬೇಂದ್ರೆಯವರ ಕಾವ್ಯಶೈಲಿ, ಕನ್ನಡಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೮೪.

೧೨. ನಾರಾಯಣ ಕೆ.ವಿ.ಬೇಂದ್ರೆ ದೃಷ್ಟಿ, ಕನ್ನಡಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು ೧೯೮೪.

೧೩. ನಾಗರಾಜ್ ಡಿ.ಆರ್., ಶಕ್ತಿ ಶಾರದೆಯಮೇಳ, ಅಕ್ಷರ ಪ್ರಕಾಶನ, ಸಾಗರ, ೧೯೮೭.

೧೪. ನಾರಾಯಣ ಪ್ರಸಾದ್ ಕೆ.ಜಿ., ಬೇಂದ್ರೆ ಕಾವ್ಯದ ಛಂದಸ್ಸು, ಅರ್ಕಾವತಿ ಪ್ರಕಾಶನ, ಮೈಸೂರು ೧೯೯೬.

೧೫. ಬುದ್ದಣ್ಣ ಹಿಂಗಮಿರೆ (ಸಂ.) ಇಳಿದು ಬಾ ತಾಯಿ (ಶ್ರೀ ಬೇಂದ್ರೆ ಅಭಿನಂದನ ಗ್ರಂಥ), ಸಮಾಜ ಪುಸ್ತಕಾಲಯ, ಧಾರವಾಡ, ೧೯೭೭.

೧೬. ಬಸವರಾಜ ಕಲ್ಗುಡಿ, ಬೇಂದ್ರೆಯವರ ಕಾವ್ಯದಲ್ಲಿ ಪ್ರೇಮದ ಆವಿಷ್ಕಾರ; ಸ್ವರೂಪಗಳು, ಕನ್ನಡ ಸಂಘ, ಕ್ರೈಸ್ಟ್‌ಕಾಲೇಜ್, ಬೆಂಗಳೂರು ೧೯೮೬.

೧೭. ಮುಗಳಿ ರಂ.ಶ್ರೀ., ಬೇಂದ್ರೆ ಕಾವ್ಯ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೮೬.

೧೮. ಮುಗಳಿ ರಂ.ಶ್ರೀ. ಬೇಂದ್ರೆಯವರ ಕಾವ್ಯದಲ್ಲಿ ವಿರಾಟ್‌ದರ್ಶನ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೮.

೧೯. ರಾಜೇಂದ್ರಚೆನ್ನಿ, ಬೇಂದ್ರೆ ಕಾವ್ಯ, ಸಂಪ್ರದಾಯ ಮತ್ತು ಸ್ವಂತಿಕೆ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೮೯.

೨೦. ರಾಘವೇಂದ್ರರಾವ್ ಎಚ್.ಎಸ್. ಹಾಡೆಹಾದಿಯ ತೋರಿತು ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೫

೨೧. ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೯೦.

೨೨. ವಾಮನ ಬೇಂದ್ರೆ, ಬೇಂದ್ರೆ ಸಾಂಖ್ಯ ವಿಜ್ಞಾನ ಸಿದ್ಧಾಂತ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೫.

೨೩. ವಿಜಯಾದಬ್ಬೆ, ಬೇಂದ್ರೆಯವರ ಕಾವ್ಯದಲ್ಲಿ ಒಂದು ಅನುಭಾವದ ನಿಚ್ಚಣಿಕೆ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೮೯.

೨೪. ಶಂಕರಮೊಕಾಶಿ ಪುಣೇಕರ, ಬೇಂದ್ರೆ ಕಾವ್ಯಮೀಮಾಂಸೆ, ಸಾಹಿತ್ಯ ಭಂಡಾರ, ಬೆಂಗಳೂರು, ೧೯೮೯.

೨೫. ಶಿವರುದ್ರಪ್ಪ ಜಿ.ಎಸ್., (ಸಂ), ಕವಿಬೇಂದ್ರೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೧೯೨

೨೬. ಶಿವಾರೆಡ್ಡಿ ಕೆ.ಸಿ., ಕನ್ನಡದ ಹಾಡುಪಾಡು, ಅಧ್ಯಯನ ಮಂಡಲಿ, ಬೆಂಗಳೂರು, ೨೦೦೩.

೨೭. ಶ್ರೀಕಂಠಯ್ಯ ತೀ.ನಂ., ಸಮಾಲೋಕನ, ಶಾರದಾಮಂದಿರ, ರಾಮಯ್ಯರ್‌ರಸ್ತೆ, ಮೈಸೂರು ೧೯೫೮.

೨೮. ಶ್ರೀನಿವಾಸರಾಜು. ಚಿ., (ಸಂ), ಬೇಂದ್ರೆ ಸಾಹಿತ್ಯ ಒಂದು ಅಧ್ಯಯನ, ಕನ್ನಡ ಸಂಘ, ಕ್ರೈಸ್ಟ್‌ಕಾಲೇಜ್, ಬೆಂಗಳೂರು, ೨೦೦೦.

೨೯. ಸಿ.ಪಿ.ಕೆ., ಬೇಂದ್ರೆ ನಾಲ್ಕುನೋಟ, ಶಕ್ತಿಪ್ರಕಾಶನ, ಮೈಸೂರು ೧೯೯೫

೩೦. ಸುಮತೀಂದ್ರನಾಡಿಗ, ಬೇಂದ್ರೆಯುವರ ಕಾವ್ಯದ ವಿಭಿನ್ನನೆಲೆಗಳು, ಸುವಿದ್ಯಾಪ್ರಕಾಶನ, ಬೆಂಗಳೂರು ೧೯೮೯.

### ಇಂಗ್ಲಿಷ್‌ನಲ್ಲಿ

1. Amur G.S., Dathatreya Ramachandra Bendre, Sahitya Akademi, New Delhi, 1994

2. Gokak V.K., Bendre: Poet and Seer, Somaiya publications, Bombay, 1970.

3. Krishnappa G., D.R. Bendre, Kuvempu Institute of Kannada studies, University of Mysore, Mysore, 1997.

4. Raghavendra Rao K., The pea-cock smile, Kannada sahitya parishat, Bangalore, 1977.

5. Raghavendra Rao K. Vamana Bendre, K.S. Sharma (Edited and Translated), Springfire, an anthology of Bendre poetry, Ambikatanayadatta Vedike and purogami sahitya prakashana, Hubli, 1986

* * *

## ಲೇಖಕರ ಕೃತಿಗಳು

೧. ಹಾಡುಹಕ್ಕಿ ಅಂಬಿಕಾತನಯದತ್ತ (೧೯೯೫)
ಮೂರನೆ ಆವೃತ್ತಿ, ೨೦೧೨

೨. ಡಿ.ಆರ್. ಬೇಂದ್ರೆ (೧೯೯೭)
ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಆಂಗ್ಲಕೃತಿ.

೩. ನಾಕುತಂತಿ–ಒಂದು ಟಿಪ್ಪಣಿ (೨೦೦೦)
ಮೂರನೆ ಆವೃತ್ತಿ –೨೦೧೨

೪. ರಸ್ತೆ ನಿಯಮಗಳು (೨೦೦೦)
ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಕೃತಿ
ಐದನೆ ಆವೃತ್ತಿ –೨೦೧೫

೫. ಹೂತಽದ ಹುಣಸಿ (೨೦೦೦)
(ದ.ರಾ. ಬೇಂದ್ರೆ ಕಾವ್ಯ ವಿಮರ್ಶೆ)
ಎರಡನೆ ಆವೃತ್ತಿ ೨೦೧೧

೬ ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ–ಒಂದು ಅಧ್ಯಯನ (೨೦೦೧)
(ಪಿಎಚ್.ಡಿ., ಮಹಾಪ್ರಬಂಧ)
ಎರಡನೆ ಆವೃತ್ತಿ ೨೦೧೨

೭ ಬರೆಹದಲ್ಲಿ ಬೇಂದ್ರೆಯವರ ಬದುಕು (೨೦೦೮)
ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ ಪ್ರಕಟಿಸಿರುವ ಕೃತಿ.

೮. ಅಂತರಂಗದತ್ತ ನಯನ (೨೦೧೦)

೯. ಮಹಾಕವಿ ಲಕ್ಷ್ಮೀಶನ ವಚನ ಜೈಮಿನಿ ಭಾರತ (೨೦೧೨)

೧೦. ಹರಿಹರ ಮಹಾಕವಿಯ ವಚನ ಗಿರಿಜಾಕಲ್ಯಾಣ (೨೦೧೩)

೧೧. ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ (೨೦೧೫)

೧೨. ರಾಘವಾಂಕ ಮಹಾಕವಿಯ ವಚನ ಹರಿಶ್ಚಂದ್ರ ಚಾರಿತ್ರ (೨೦೧೫)





ಬೇಂದ್ರೆಯವರಂಥ ಕವಿ ಕನ್ನಡಕ್ಕೆ ದೊರಕಿದ್ದು ದೊಡ್ಡ ಭಾಗ್ಯ. ಆ ಭಾಗ್ಯವನ್ನು ಅರಿತುಕೊಳ್ಳುವುದೇ ನಮ್ಮ ಪುಣ್ಯ. ಬುದ್ಧಿಭಾವಗಳ ನಿತ್ಯ ಆಲಿಂಗನದ ತಿರುವು ಬೇಂದ್ರೆ ಕಾವ್ಯ. ಅದರ ವಿಮರ್ಶಕನಿಗೂ ಅದೇ ನಿತ್ಯ ಉತ್ಸಾಹ ಅಗತ್ಯ. ಅದೇ ಹುಮ್ಮಸ್ಸನ್ನು ಕಾಯ್ದುಕೊಂಡಿರುವುದು ಜಿ. ಕೃಷ್ಣಪ್ಪನವರ ವೈಶಿಷ್ಟ್ಯ.

ಡಾ. ಶಂಕರ ಮೊಕಾಶಿ ಪುಣೇಕರ

'ಅರಳು ಮರಳು' ಸಂಕಲನಕ್ಕೆ ಹಿಂದಿನ ಬೇಂದ್ರೆಯೇ ನಿಜವಾದ ಕವಿ, ಅನಂತರದವರು ಅಲ್ಲ ಎಂಬುದು ಹಿಂದೆ ಬಹುತೇಕ ವಿಮರ್ಶಕರ ಮಾತಾಗಿತ್ತು. ಆದರೆ ಕೃಷ್ಣಪ್ಪನವರು ಬೇಂದ್ರೆಯವರ ಆಚಿನ ಕವನಗಳನ್ನೂ ತಮ್ಮ ಸಮರ್ಥ ಪ್ರತಿಪಾದನೆಯಿಂದ ಎತ್ತಿ ನಿಲ್ಲಿಸಿರುವುದು ಅವರ ಬೇಂದ್ರೆತನಕ್ಕೆ ಸಾಕ್ಷಿಯಾಗಿದೆ.

ಡಾ. ಪಿ.ವಿ.ನಾರಾಯಣ

ಕನ್ನಡ ಸಂಸ್ಕೃತಿ, ಕನ್ನಡದ ಅನುಭಾವಿ ಪರಂಪರೆಗಳು ಮತ್ತು ಕನ್ನಡದ ಸಮಸ್ತ ಬೇರುಗಳನ್ನು ಚೆನ್ನಾಗಿ ಹಿಡಿದು ಅದರ ಮೂಲಕವೇ ಬೇಂದ್ರೆ ಎಂಬ ಮಹಾವೃಕ್ಷವನ್ನು ಕೃಷ್ಣಪ್ಪನವರು ಪ್ರವೇಶ ಮಾಡಿದ್ದು ಅಸಾಧಾರಣವಾದುದೆಂದೇ ಭಾವಿಸಿದ್ದೇನೆ.

ಡಾ. ಮಲ್ಲೇಪುರಂ ಜಿ. ವೆಂಕಟೇಶ



ವಂಶಿ ಪಬ್ಲಿಕೇಷನ್ಸ್
ನಂ.72/2, 9ನೇ ಕ್ರಾಸ್,ವಾಜ್ಜರಹಳ್ಳಿ ಮುಖ್ಯರಸ್ತೆ,
ಸುಭಾಷ್‌ನಗರ, ಜ್ಯೋತಿನಗರದ ಹತ್ತಿರ,
ನೆಲಮಂಗಲ, ಬೆಂಗಳೂರು – 562 123
ಮೊಬೈಲ್: 97430 55511
ಇ-ಮೇಲ್: vamshipublications@gmail.com

dailyhunt

